# ನಮ್ಮೂರಿನ ನೆನಪುಗಳು

■ ಡಾ. ಚಂದ್ರಪ್ಪಗೌಡ





# ನಮ್ಮೂರಿನ ನೆನಪುಗಳು

ಡಾ|| ಎಚ್.ಡಿ. ಚಂದ್ರಪ್ಪಗೌಡ



ನೆಲಮನೆ ಪ್ರಕಾಶನ
ರಂಗನಾಥನಗರ, ಶ್ರೀರಂಗಪಟ್ಟಣ
ಮಂಡ್ಯ ಜಿಲ್ಲೆ

NAMMURINA NENAPUGALU : Memories of Village Life, Written by Dr.H.D. Chandrappa Gowda, Shimoga. Published by Nelamane Prakashana, Ranganatha Nagara, Srirangapatna, Mandya Dist.

First Impression : **1999** Pages : **X + 78**



[redacted]

**ಬೆಲೆ : ರೂ. 40/-**

ಮುಖಪುಟ ವಿನ್ಯಾಸ : ಹಾದಿಮನಿ

*ಬೆಂಗಳೂರು ಸಂಪರ್ಕ ವಿಳಾಸ*
ನೆಲಮನೆ ಪ್ರಕಾಶನ
ನಂ.839, 9ನೇ ಮುಖ್ಯರಸ್ತೆ, 7ನೇ ಅಡ್ಡರಸ್ತೆ
ಶ್ರೀನಗರ, ಬೆಂಗಳೂರು - 560 050

*ಮುದ್ರಕರು*
ಲಾವಣ್ಯ ಮುದ್ರಣ
ನಂ.19, ಬಿ.ಎಸ್.ಕೆ. 1ನೇ ಹಂತ
ಬೆಂಗಳೂರು - 50 ☎ 6610563

## ಎರಡು ಮಾತು

ನೆನಪು ಮಾನವನ ಪಾಲಿಗೆ ವರವೂ ಹೌದು, ಶಾಪವೂ ಹೌದು. ನೆನಪಿನ ನೆರವಿಲ್ಲದ ಜೀವಿಯ ಬದುಕನ್ನು ಊಹಿಸುವುದೂ ಕಠಿಣ.

ನಿಗೂಢ ಬದುಕಿನ ನೋವು-ನಲಿವುಗಳಿಗೆ ಮನುಷ್ಯ ಸ್ಪಂದಿಸುತ್ತಲೇ ಇರುತ್ತಾನೆ. ಆ 'ಸ್ಪಂದನ'ವೇ ಒಂದು ಚೇತೋಹಾರಿ ಪ್ರಕ್ರಿಯೆ. ಸ್ಪಂದನದ ಪಳೆಯುಳಿಕೆ ನೆನಪು.

ಹಿರಿಯರಾದ ಡಾ. ಹೊಳೆಗದ್ದೆ ದುಗ್ಗಪ್ಪ ಗೌಡ ಚಂದ್ರಪ್ಪಗೌಡರವರಿಗೆ ಇದೀಗ ಎಪ್ಪತ್ತು ವರ್ಷಗಳು. ವೈದ್ಯರಾಗಿ, ಶಸ್ತ್ರವೈದ್ಯರಾಗಿ, ನಿರಂತರ ಸರ್ಕಾರಿ ಸೇವೆಯಲ್ಲಿದ್ದು, ನಿವೃತ್ತರಾದವರು. ಬರವಣಿಗೆಯನ್ನು ಬಹಳ ತಡವಾಗಿ ಪ್ರಾರಂಭಿಸಿದರೂ, ಈಗ ಅವರು ಸಾಧಿಸಿರುವ ಸಾಧನೆ ಬಹಳ ಶ್ರೇಷ್ಠ ಮಟ್ಟದ್ದು. ಇದೀಗ ವೃತ್ತಿಗೆ ವಿರಾಮ ಹೇಳಿ, ಸಂದ ಬದುಕಿನ ನೆನಪನ್ನು ಮೆಲುಕು ಹಾಕುತ್ತ ಅಕ್ಷರ ರೂಪದಲ್ಲಿ ಜೋಡಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಅದರ ಫಲ "ನಮ್ಮೂರಿನ ನೆನಪುಗಳು".

ಡಾ. ಗೌಡರು ಮತ್ತು ನಾನು ನೆರೆಹೊರೆಯವರು. ಚಂದ್ರಪ್ಪಗೌಡರ ಹಾಗೆ ನನ್ನ ಮನೆತನ ಕೂಡ ವರಾಹಿ ಜಲಾಶದಿಂದ ನಿರಾಶ್ರಿತರಾದವರು. ನಮಗೆ ಯಾರಾದರೂ ನಮ್ಮ ಊರನ್ನು ತೋರಿಸಲು ಕೇಳಿದರೆ, 'ಮಾನಿ' ಅಣೆಕಟ್ಟಿನ ಮೇಲೆ ನಿಂತು, ಹಿನ್ನೀರಿನ ಮಧ್ಯೆ ಬೆರಳು ಮಾಡಿ "ಅಲ್ಲಿ ನೂರಡಿ ನೀರಿನೊಳಗೆ ನಮ್ಮ ಆದಿಮನೆ, ಗದ್ದೆ, ತೋಟ ಎಲ್ಲ ಇದ್ದವು. ಅಲ್ಲಿ ನಮ್ಮ ಕುಟುಂಬಸ್ಥರು ಬಾಳಿ ಬದುಕಿದ್ದರು ಅನ್ನುವುದಷ್ಟೇ ಸಾಧ್ಯ ನಮಗೀಗ".

ಇಂಥ ಹಿನ್ನೆಲೆಯಲ್ಲಿ ಚಂದ್ರಪ್ಪಗೌಡರ 'ನಮ್ಮೂರಿನ ನೆನಪುಗಳು' ಅಕ್ಷರ ರೂಪದಲ್ಲಿ ದಾಖಲಾಗುತ್ತಿವೆ. ತಮ್ಮ ಬಾಲ್ಯದ ದಿನಗಳ ನೆನಪಿನ ಸುರುಳಿಯನ್ನು ಬಿಚ್ಚುತ್ತ ಹೋಗುವ ಗೌಡರು ಅವರ ಊರಿನ ಹೊಳೆಗೂ ಅಲ್ಲಿನ ಜನಕ್ಕೂ ಇದ್ದ ಸಂಬಂಧದ ಎಳೆಯನ್ನು ನವಿರಾಗಿ ವಿವರಿಸುತ್ತಾರೆ. ಮತ್ತೆ ಬಾರದ ಬಾಲ್ಯ, ಇನ್ನಿಲ್ಲವಾದ ಆ ಪರಿಸರ, ಗೌಡರನ್ನು ಕಾಡುತ್ತವೆ. ನಮ್ಮಿಂದ ಮರೆಯಾಗಿರುವ ಮಲೆನಾಡಿನ ಹಲವಾರು ಜೀವನ ಕ್ರಮ, ವೈದ್ಯ ಪದ್ಧತಿ, ಮದುವೆ-ದಿಬ್ಬಣ ಸಡಗರ, ಈ ಭೂಭಾಗಕ್ಕೇ ವಿಶೇಷವಾದ ನೆಲದ ಸಿರಿಗೆ ಸಂಬಂಧಿಸಿದ ಹಬ್ಬ-ಹರಿದಿನಗಳ ವಿವರ ಇಲ್ಲಿ ದೊರೆಯುತ್ತವೆ.

'ಹಸಿಗೆ', 'ಹೊಳೆ-ಬಾಳೆಕಾಯಿ', 'ಹತ್ತು-ಮೀನು', 'ಯಾಪೆ', 'ಕೂಣಿ', 'ಅಂಡೆ', 'ಕಡ' ಹಾಕುವುದು ಮುಂತಾದ ಗ್ರಾಮ್ಯ ಶಬ್ದಗಳ ಭಂಡಾರವೇ ಇಲ್ಲಿ ದೊರೆಯುತ್ತದೆ. ಆ ಭಾಗದಲ್ಲಿ ಬಾಲ್ಯವನ್ನು ಕಳೆದ ನನ್ನಂಥವರಿಗೆ ತೀರ ಪರಿಚಯವಿದ್ದ ಈ ಶಬ್ದಗಳು, ಅಲ್ಲಿನ ಜೀವನ ಕ್ರಮದ ಏರುಪೇರು, ನಮ್ಮ ಬದುಕಿನ ಮಾರ್ಗಕ್ಕಾಗಿ ಅನಿವಾರ್ಯವಾದ ವಲಸೆಯಿದಾಗಿ ಈ ಶಬ್ದಗಳು ನಮ್ಮ ಸ್ಮೃತಿ ಪಟಲದಲ್ಲಿ ಅಳಿಸುತ್ತ ಬಂದಿವೆ.

ಮೂಳೆ ಚಿಕಿತ್ಸಾ ಪದ್ಧತಿ, ಸತ್ತೇಳು ದೇವಪ್ಪ ಹೆಗ್ಗಡೇರ ಪ್ರಸ್ತಾಪ, ಮಲೆನಾಡ ಶಿಕಾರಿ ಪದ್ಧತಿ, ಬಾಲಕರ ಹಕ್ಕಿ ಹಿಡಿಯುವ ಹುನ್ನಾರ, ಹೀಗೆ ಹಲವು ಪ್ರಸಂಗಗಳನ್ನು ನೆನೆಯುತ್ತ ಮಲೆನಾಡಿನ ಆ ಭಾಗದಲ್ಲಿ ಶಾಶ್ವತವಾಗಿ ನೆಲೆಯೂರಿದ್ದ ಜನಜೀವನ ಶೈಲಿಯ ಕ್ರಮ, ಇದೀಗ ಅಣೆಕಟ್ಟಿನಿಂದಾಗಿ ಸಂಪೂರ್ಣ ಮಾಯವಾದ ಬಗೆಗೆ ತಮ್ಮ ಖೇದವನ್ನು ವ್ಯಕ್ತಪಡಿಸುತ್ತಾರೆ. ಈ ರೀತಿಯ ಪ್ರಸಂಗವನ್ನೆದುರಿಸಿದ ವ್ಯಕ್ತಿಗಳು ಈ ಅನುಭವಗಳನ್ನು ಓದುವಾಗ ಅನುಭವಿಸುವ ಭಾವ ತೀವ್ರತೆಗೂ, ತಮ್ಮ ಬಂಧು-ಬಳಗ, ಮನೆ-ಜಮೀನುಗಳನ್ನು ಕಳೆದುಕೊಂಡು ವಲಸೆ ಹೋದ ವ್ಯಕ್ತಿಗಳು ಅನುಭವಿಸಬಹುದಾದ ಭಾವತೀವ್ರತೆಗೂ ವ್ಯತ್ಯಾಸವಿರುವುದು ಸಹಜವಾದರೂ, ಮಲೆನಾಡಿನ ಬದುಕಿನ ದಟ್ಟ ಅನುಭವ ಮಾತ್ರ ಸಾರ್ವತ್ರಿಕವಾಗಿ ಪುರಸ್ಕರಿಸಲ್ಪಡುತ್ತದೆ.

ಡಾ. ಚಂದ್ರಪ್ಪಗೌಡರು, ಈ ಕೃತಿಯನ್ನು ಇನ್ನಷ್ಟು ವಿಸ್ತೃತವಾಗಿ ಬರೆದಿದ್ದಲ್ಲಿ, ಬಹುಶಃ ಬಹಳಷ್ಟು ವಿಷಯಗಳು ಬೆಳಕಿಗೆ ಬರುತ್ತಿದ್ದವು : ದಾಖಲೆಯಾಗುಳಿಯುತ್ತಿದ್ದವು.

ಮುಳುಗಡೆ ಪ್ರದೇಶದ ಜನರು ಅನುಭವಿಸಿದ ಮಾನಸಿಕ, ದೈಹಿಕ ಹಾಗೂ ಸಾಂಸಾರಿಕ ಹಿಂಸೆ; ಜೀವನದ ಆರ್ಥಿಕ ಏರಿಳಿತಗಳು ಮತ್ತು ಅವರ ಇಂದಿನ ಸ್ಥಿತಿಗತಿಗಳನ್ನು ನೋಡಿದರೆ ಹೃದಯ ಹಿಂಡುತ್ತದೆ. ಸರ್ಕಾರ, ಸಮಾಜ ಕೊಡಬಹುದಾದ ಆರ್ಥಿಕ ಪರಿಹಾರ ಕೇವಲ ನಿಮಿತ್ತ ಮಾತ್ರ. ಹಣ ಅಥವಾ ಇನ್ನಾವುದೇ ರೂಪದಲ್ಲಿ ಆ ಭಾಗದ ನಿರಾಶ್ರಿತರಿಗಾದ ನೋವನ್ನು, ಮಾನಸಿಕ ಆಘಾತವನ್ನು ತುಂಬಿಕೊಡುವುದು ಸಾಧ್ಯವಿಲ್ಲದ ಮಾತು.

ಹಿರಿಯರಾದ ಡಾ. ಚಂದ್ರಪ್ಪ ಗೌಡರ ಪ್ರಯತ್ನಕ್ಕೆ ಯಶಸ್ಸು ಹಾರೈಸುತ್ತೇನೆ. ಈ ಕೃತಿ ಕುರಿತು ಎರಡು ಮಾತುಗಳನ್ನು ಬರೆಯುವ ಸದವಕಾಶವನ್ನು ಕಿರಿಯನಾದ ನನಗೆ ನೀಡಿದ ಅವರ ಹೃದಯ ವೈಶಾಲ್ಯತೆಗೆ ಆಭಾರಿಯಾಗಿದ್ದೇನೆ.

29.10.99

ಮೈಸೂರು

**ಎಚ್.ಸಿ. ವಿಷ್ಣುಮೂರ್ತಿ**

## ಅರ್ಪಣೆ

ನನ್ನ ಚಿಕ್ಕಪ್ಪಂದಿರಾದ

ಹೊಳೇಗದ್ದೆ ಮಂಜಪ್ಪಗೌಡರು

ಮತ್ತು

ಶಿದ್ದಪ್ಪಗೌಡರಿಗೆ ಗೌರವಪೂರ್ವಕವಾಗಿ.

— "ಚಂದ್ರು"

## ನಿಮ್ಮೊಂದಿಗೆ

ಯಾರಿಗೇ ಆಗಲಿ ಅವರ ದೇಶ, ನಾಡು ಮತ್ತು ಊರು ಮನೆಗಳ ಬಗೆಗೆ ಹೆಮ್ಮೆ, ಸ್ವಾಭಿಮಾನ ಇರುವುದು ಸ್ವಾಭಾವಿಕ. ನಮ್ಮ ದೇಶದ ಸಂಸ್ಕೃತಿ, ಇತಿಹಾಸ, ಪುರಾಣ, ಪ್ರಸಿದ್ಧ ಸ್ಥಳ ಅಥವಾ ವ್ಯಕ್ತಿಗಳ ನೆನಪಾದಾಗ ಮನಸ್ಸಿಗೆ ಮುದ ಉಂಟಾಗುತ್ತದೆ. ರಾಮಾಯಣ, ಮಹಾಭಾರತದ ಪೌರಾಣಿಕ ಘಟನೆಗಳು ಹಾಗೂ ಇತ್ತೀಚಿನ ಸ್ವಾತಂತ್ರ್ಯ ಆಂದೋಲನ ಭಾರತೀಯರೆಲ್ಲರಲ್ಲೂ ಅಭಿಮಾನ ಉಕ್ಕಿಸುತ್ತವೆ. ವಿದೇಶದವರು ನಮ್ಮನ್ನು ಗಾಂಧೀ ನಾಡಿನವರೆಂದು ಗುರುತಿಸಿದಾಗ ಪುಳಕಿತರಾಗದವರುಂಟೆ ? ನಮ್ಮ ಮೂಲ ನೆಲೆಯ ಬಗೆಗೆ ಎಲ್ಲರಲ್ಲೂ ಇರಬೇಕಾದ ಸ್ವಾಭಿಮಾನವನ್ನು ಊರ್ಜಿತಗೊಳಿಸಿಕೊಳ್ಳಬೇಕಾದ ಅವಶ್ಯಕತೆಯ ಬಗೆಗೆ ಇವನ್ನೆಲ್ಲಾ ಪ್ರಸ್ತಾಪಿಸಬೇಕಾಯಿತು.

ಯಾವುದೇ ಸಾಹಿತ್ಯ ಕೃತಿಯನ್ನು ಅವಲೋಕಿಸಿದ ಅವುಗಳ ಕರ್ತೃಗಳು ಹುಟ್ಟಿ ಬೆಳೆದ ಮನೆ, ಊರು ಅವರ ಮೇಲೆ ಬೀರಿದ ಪ್ರಭಾವಗಳನ್ನು ಪ್ರಸ್ತಾಪ ಮಾಡಿರುವುದನ್ನು ನೋಡಬಹುದು. ಸುತ್ತಲ ಪರಿಸರದ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ಅವರ ನಡೆವಳಿಕೆಯನ್ನು ರೂಪಿಸಿರಲು ಸಾಧ್ಯ. ಪಟ್ಟಣದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುವ ಹಳ್ಳಿಯ ಬಾಲಕರಲ್ಲಿ ಅವರ ಇತರ ಸಹಪಾಠಿಗಳಿಗಿಂತ ಭಿನ್ನ ಗುಣಲಕ್ಷಣಗಳನ್ನು ಸುಲಭವಾಗಿ ಗುರುತಿಸಬಹುದು. ಹರಿಯುವ ಹೊಳೆ ಇದ್ದ ಊರಿನಿಂದ ಬಂದ ಬಾಲಕ ಪೇಟೆಯ ಈಜುಕೊಳದಲ್ಲಿ ಸಲೀಸಾಗಿ ಈಜಾಡಬಲ್ಲ. ತಿರುಗಾಟಕ್ಕೆ ಹೊರ ಊರುಗಳಿಗೆ ಹೋದಾಗ ನದಿಯೋ, ಸಮುದ್ರವೋ ಅಲ್ಲಿದ್ದರೆ ಯಾವ ಆತಂಕವೂ ಇಲ್ಲದೆ ಸಲೀಸಾಗಿ ನೀರಿಗಿಳಿದು ಬಿಡುತ್ತಾನೆ. ಅಂತಹ ಅನುಭವವಿಲ್ಲದ ಪೇಟೆಯ ಹುಡುಗರಿಗೆ ಆ ಬಗಗೆ ಇಷ್ಟವಿರುವು ದಾದರೂ ನೀರಿಗಿಳಿಯಲು ಅಂಜಿಕೆ ಸ್ವಾಭಾವಿಕ. ನಮ್ಮೆಲ್ಲರ ಸ್ವಭಾವ, ನಡೆ, ನುಡಿಗಳೆಲ್ಲಾ ಈ ತರಹದ ಪ್ರಭಾವಗಳಿಂದಲೇ ರೂಪಿತವಾಗಿರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ನಾವೆಲ್ಲರೂ ಪರಿಸರ ಪ್ರಭಾವದ ಕೂಸುಗಳೇ ಅಲ್ಲವೆ ?

ಬಾಲ್ಯ ಜೀವನದ ಪೂರ್ಣ ವಿವರಗಳು ಎಲ್ಲರ ನೆನಪಿನಲ್ಲಿ ಸ್ಥಿರವಾಗಿ ಉಳಿದು ಕೊಂಡಿರಲು ಸಾಧ್ಯವಿಲ್ಲ. ಆದರೆ ಕೆಲವು ಪ್ರಮುಖ ಘಟನೆಗಳ ನೆನಪುಗಳು ಅಚ್ಚಳಿಯದೆ ಉಳಿಯುವುದರಲ್ಲಿ ಸಂದೇಹವಿಲ್ಲ. ಸತ್ಯಹರಿಶ್ಚಂದ್ರ, ಭಕ್ತಪ್ರಹ್ಲಾದ, ಪಿತೃಭಕ್ತಿಯ ಶ್ರವಣ ಮುಂತಾದವರ ಜೀವನದ ನಾಟಕಗಳನ್ನು ಬಾಲ್ಯದಲ್ಲಿ ನೋಡಿದ್ದ ಮೋಹನದಾಸ ಗಾಂಧಿ

ಅವುಗಳಿಂದ ತುಂಬಾ ಪ್ರಭಾವಿತರಾಗಿದ್ದರು. ಮುಂದೆ ಮಹಾತ್ಮಾ ಗಾಂಧಿಯಾಗಿ ಆದರ್ಶಜೀವ ನಡೆಸಲು ಪುರಾಣ ಪುರುಷರ ಜೀವನ ಚರಿತ್ರೆಗಳು ತಮ್ಮ ಮೇಲೆ ಪ್ರಭಾವ ಬೀರಿದ್ದವೆಂದು ಹೇಳುತ್ತಿದ್ದರು. ಬಾಲಕ ಪ್ರಹ್ಲಾದನ ಪಾತ್ರ ಮತ್ತು ಅವನು ಅನುಭವಿಸುತ್ತಿದ್ದ ಕಷ್ಟಕೋಟಲೆಗಳ ನಿರೂಪಣೆ ನಮ್ಮೂರ ಯಕ್ಷಗಾನದಲ್ಲಿ ಮೂಡಿ ಬಂದು ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚಳಿಯದೇ ಉಳಿದುಕೊಂಡಿದೆ. ನಂತರದ ವರ್ಷಗಳಲ್ಲಿ ವೈಭೋವೇಪಿತ ರಂಗು ರಂಗಿನ ದೃಶ್ಯಗಳಿದ್ದ ಸಿನಿಮಾಗಳಲ್ಲಿ ಪ್ರಹ್ಲಾದನ ಚಿತ್ರಣ, ಬಾಲ್ಯದ ಯಕ್ಷಗಾನದ ಅನುಭವದ ಮುಂದೆ ಪೇಲವವೆಂದೇ ಹೇಳಬಲ್ಲೆ. ತಂದೆ ಹಿರಣ್ಯಕಷಿಪು ಪ್ರಹ್ಲಾದನನ್ನು ಜಗ್ಗಿ ಎಳೆದು 'ಹರ' ಎಂದು ಭಜನೆ ಮಾಡು ಎಂದು ಎಷ್ಟೇ ಗೋಳಾಡಿಸಿದರೂ "ಹರಿ ಹರಿ" ಎಂದು ಸಾರಿ ಸಾರಿ ಹೇಳುತ್ತಿದ್ದ ಬಾಲಕನ ದೃಶ್ಯ ಇಂದಿಗೂ ಕಣ್ಣ ಮುಂದೆ ಕಟ್ಟಿ ನಿಂತಿದೆ. ತಂದೆಯ ಕಟ್ಟಪ್ಪಣೆಯಂತೆ ಕೃಷ್ಣಾರ್ಜುನರೊಡನೆ ಯುದ್ಧಕ್ಕೆ ಹಾಜರಾಗಲು ವಿಳಂಬ ಮಾಡಿದ ಮಗ ಸುಧನ್ವನಿಗೆ ಕುದಿಯುವ ತೈಲದ ಕೊಪ್ಪರಿಗೆಗೆ ಹಾರುವ ಶಿಕ್ಷೆ ವಿಧಿಸುತ್ತಾನೆ. ಸುಧನ್ವ ವೇಷದಾರಿ ಮೇಗರವಳ್ಳಿ ಗುಂಡಪ್ಪ ಭಂಡಾರಿ ಸ್ತುತಿಸುತ್ತಿದ್ದ ದೇವರ ನಾಮಾವಳಿ ಇಂದು ರೇಡಿಯೋಗಳಲ್ಲಿ ಭಿತ್ತರವಾಗುವ ಯಾವ ಸಹಸ್ರನಾಮ ಪಠಣಕ್ಕಿಂತ ಕಡಿಮೆಯದ್ದಾಗಿರಲಿಲ್ಲ. ಹಾಗೆಯೇ ನಮ್ಮೂರಿನ ಗಣಮಗ ಬಚ್ಚನ ಸಾತ್ವಿಕ ಜೀವನ ಕ್ರಮ, ಅವನ ಮೈಮೇಲೆ ಬರುತ್ತಿದ್ದ 'ಗಣ'ದ ಹೇಳಿಕೆ-ಕೇಳಿಕೆ ಈಗ ಅವುಗಳ ಮೇಲೆ ನಂಬಿಕೆ ಇಲ್ಲದಿದ್ದರೂ ನನ್ನಲ್ಲಿ ಅಚ್ಚರಿಯುಂಟುಮಾಡಿವೆ. ಎಳೆಗರುಗಳನ್ನು 'ಬೀಜ ಮರ್ಧನ' ಮಾಡುವ ಸಮಯದಲ್ಲಿ ತಪ್ಪಿಸಿಕೊಂಡು ನನ್ನ ಮೇಲೆ ಹಾರಿದಾಗ ಪ್ರಾಣ ಉಳಿಸಿಕೊಂಡದ್ದನ್ನು ನೆನಪಿಸಿಕೊಂಡರೆ ಈಗಲೂ ಮೈ ನಡುಕ ಹುಟ್ಟುತ್ತದೆ. ಪ್ರಕೃತಿದತ್ತ ಮಲೆನಾಡಿನ ವನಸಿರಿಯ ಪ್ರಶಾಂತ ವಾತಾವರಣದಲ್ಲಿ ಬೆಳೆದ ನನಗೆ ಈಗಿನ ಕಾಂಕ್ರೀಟ್ ಜಂಗಲಿಯ ವಾಸ್ತವ್ಯ "ಅಯ್ಯೋ, ಹೋಯಿತೇ ಆ ಲೋಕ, ಅಯ್ಯೋ ಬಂದಿತೇ ಈ ನಾಕ" ಎನ್ನುವಂತಾಗಿದೆ. ಇಂತಹ ಹಲವಾರು ಸಿಹಿ ಕಹಿ ಪ್ರಸಂಗಗಳು ನನ್ನನ್ನು ಆಗಾಗ್ಗೆ ಕಿತ್ತು ತಿನ್ನುವಂತಾಗುತ್ತವೆ.

ನಮ್ಮೂರಿನ ನೆನಪುಗಳು ಇತ್ತೀಚಿನ ದಿನಗಳಲ್ಲಿ ಪದೇ ಪದೇ ಮನಸ್ಸಿನ ಸ್ವಾಸ್ಥ್ಯವನ್ನೇ ಕೆಡಿಸಲಾರಂಭಿಸಿವೆ. ಕಾರಣ, ನನ್ನ ನೆಚ್ಚಿನ ಊರು ಈಗ ಉಳಿದಿಲ್ಲ. ಅಲ್ಲಿದ್ದ ನಮ್ಮ ಮನೆ-ಮಠ, ಗದ್ದೆ-ತೋಟ, ಕಾಡು-ಹೊಳೆ ಯಾವುದೂ ಉಳಿದಿಲ್ಲ. ಈಗ ಸುಮಾರು 50-70 ವರ್ಷಗಳ ಹಿಂದೆ ಉತ್ಸಾಹೀ ಯುವ ಇಂಜಿನಿಯರ್ ಒಬ್ಬ ನಮ್ಮ ಪ್ರದೇಶದ ಕಾಡು, ಬೆಟ್ಟ ಬಯಲು ನದಿಗಳಲ್ಲಿ ತಿರುಗಾಡಿದ್ದೇ ನಮಗೆ ಮುಳುವಾಯಿತು. ಶತಶತಮಾನಗಳಿಂದ ನಮ್ಮ ಪೂರ್ವಜರ ಒಡನಾಡಿಯಾಗಿದ್ದ ವಾರಾಹಿ ನದಿಗೆ ಅಡ್ಡಗಟ್ಟೆ ಹಾಕಿ ವಿದ್ಯುತ್ತನ್ನು ಉತ್ಪಾದಿಸುವ ಯೋಜನೆ ಅವನಿಗೆ ಹೊಳೆಯಿತಂತೆ. ಮುಂದೆ ಅದು ಅರ್ಧ ಶತಮಾನದ ನಂತರ ರೂಪುಗೊಂಡಿತು. ವಾರಾಹಿ ಜಲವಿದ್ಯುತ್ ಯೋಜನೆ ಜಾರಿಗೆ ಬಂದಿತು. ಆ ಪ್ರದೇಶದ ಊರು ಮನೆ ಕಾಡುಗಳೆಲ್ಲಾ ಜಲಪ್ರಳಯದಲ್ಲಿ ಮುಳುಗಿಹೋದವು.

ಪ್ರಕೃತಿ ನಾಶವಾಯಿತು. ಜನ ದಿಕ್ಕಾಪಾಲಾಗಿ ಚದುರಿಹೋದರು. ಸಾವಿರಾರು ವರ್ಷಗಳಿಂದ ಶಾಂತಿಯುತವಾಗಿ ಜೀವನ ನಡೆಸಿಕೊಂಡಿದ್ದ ಒಂದು ನಾಗರಿಕತೆಯೇ ಅಳಿಸಿಹೋಯಿತು. ನನಗೀಗ ಉಳಿದಿರುವುದು ನನ್ನೂರಿನ ನೆನಪುಗಳು ಮಾತ್ರ. ಅವನ್ನು ನಿಮ್ಮ ಹತ್ತಿರ ಹಂಚಿಕೊಂಡಾದರೂ ಸಾಂತ್ವನ ಪಡೆಯುವ ಬಯಕೆ - "ಹೇಳು, ನ ದುಃಖಂ ಪಂಚ ಬಿಸ್ಸಹ ವೆನ್ನದೇ ವಚನ" ಎಂಬ ಕುಂತಿಯ ಉದ್ಗಾರದಿಂದ ಪ್ರಭಾವಿತನಾಗಿ ತೋಚಿದ್ದನ್ನೆಲ್ಲಾ ಗೀಚಿದ್ದೇನೆ. ತಾವೂ ಮರುಗುವಂತಾದರೆ ಮರುಗಿ, ಇಲ್ಲವಾದರೆ ಇದೊಂದು ವ್ಯಥಾ ಪ್ರಲಾಪವೆಂದು ಮನ್ನಿಸಿಬಿಡಿ.

ಈ ಪುಟ್ಟ ಕೃತಿಯ ಬಗೆಗೆ ಪರಿಚಯಾತ್ಮಕವಾಗಿ ಎರಡು ಮಾತುಗಳನ್ನು ಬರೆದು ಕೊಟ್ಟ ನಮ್ಮೂರಿನವರೇ ಆದ ಖ್ಯಾತ ಸಾಹಿತಿ ಮತ್ತು ಶಸ್ತ್ರವೈದ್ಯ ಡಾ|| ಎಚ್.ಸಿ. ವಿಷ್ಣುಮೂರ್ತಿಯವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಕೃತಿಯ ಹಸ್ತಪ್ರತಿ ತಯಾರಾಗುತ್ತಿದ್ದಂತೆಯೇ ಪ್ರಕಟಣೆಗೆ ಮುಂದಾದ ಶ್ರೀಯುತ ನೆಲಮನೆ ದೇವೇಗೌಡರು ಮತ್ತು ಅವರ ಪ್ರಕಾಶನ ಸಂಸ್ಥೆಯವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿ ಹೊರತಂದಿರುವ ಬೆಂಗಳೂರಿನ ಲಾವಣ್ಯ ಮುದ್ರಣ ಸಂಸ್ಥೆಯವರಿಗೆ ಹೃತ್ಪೂರ್ವಕ ನಮನಗಳು.

ಶಿವಮೊಗ್ಗ

ಡಾ|| ಎಚ್.ಡಿ. ಚಂದ್ರಪ್ಪಗೌಡ

# ಪ ರಿ ವಿ ಡಿ

# ನಮ್ಮೂರು

ನಮ್ಮೂರು ಹೊಳೆಗದ್ದೆ ; ಇದೇನು ಪ್ರಕೃತಿಯ ಎರಡು ಸ್ವಾಭಾವಿಕ ಸ್ಥಿತಿಗಳನ್ನು ಸೇರಿಸಿ ನಿಮ್ಮೂರೆಂದು ಹೇಳುತ್ತಿದ್ದೀರೆಂದು ಅಚ್ಚರಿ ಪಡಬೇಡಿ. ನಮ್ಮೂರಲ್ಲಿ ಹರಿಯುವ ಹೊಳೆಯಿದೆ ; ಅದರ ಪಕ್ಕದಲ್ಲಿ ಭತ್ತದ ಗದ್ದೆಗಳೂ ಇವೆ. ಮಳೆಗಾಲದ ಕೆಲದಿನಗಳು ಹೊಳೆ ಉಕ್ಕಿಹರಿದು ಹೊಳೆ, ಗದ್ದೆ ಎರಡೂ ಒಂದಾಗುವುದು ಅಪರೂಪವೇನಲ್ಲ. ಬಹುಶಃ ಅದರಿಂದಲೇ ನಮ್ಮೂರಿಗೆ ಆ ಹೆಸರು; ಬೇರಾವ ಐತಿಹಾಸಿಕ ಕಾರಣ ಇದ್ದಂತಿಲ್ಲ. ನಾವು ಎಳೆಯರಾಗಿದ್ದಾಗ ಮನೆಯ ಹತ್ತಿರದವರೆಗೂ ನೆರೆಯ (ಪ್ರವಾಹದ) ನೀರು ಬರುವುದರ ಸಂಭ್ರಮ ಬೇರೆಷ್ಟು ಜನ ಅನುಭವಿಸಲು ಸಾಧ್ಯ ? ಸಂತಸದಿಂದ ನೀರಿಗಿಳಿದು ಆಡುವಾಗಿನ ಆನಂದ ಇನ್ನೆಲ್ಲಿ ? ನೆರೆಯ ನೀರೊಳಗೆ ಇಳಿದರೆ ಅಪಾಯ ವಾಗುತ್ತದೆಂದೇ ಮನೆಯವರು ಎಷ್ಟು ತಡೆದರೂ ನಾವು ಇಳಿಯದೇ ಬಿಡುತ್ತಲೇ ಇರಲಿಲ್ಲ. ನೀರಿನಲ್ಲಿ ಸ್ವಲ್ಪ ದೂರವಾದರೂ ನಡೆದೋ, ಈಜಾಡಿ ನೆನೆದು ಒದ್ದೆಮುದ್ದೆ ಯಾಗದಿದ್ದರೆ ತೃಪ್ತಿಯಾಗುತ್ತಲೇ ಇರಲಿಲ್ಲ. ಮತ್ತೆ ಗಂಗಾಪೂಜೆ ನಡೆಯಲೇಬೇಕು. ನೀರಿನ ಅಂಚಿನಲ್ಲಿ ನಿಂತು ಹಣ್ಣು ಕಾಯಿ ಒಡೆದು, ಊದುಬತ್ತಿ ಹಚ್ಚಿ ನಮಸ್ಕಾರ ಮಾಡುವುದು ; ನೀರಿಗೆ ಸೌತೇಕಾಯಿ ಹಾಕಿ, ಕಾಸುಗಳನ್ನು ಎಸೆದು "ಇಷ್ಟಕ್ಕೇ ಇಳಿದು ಹೋಗು ಗಂಗಾ ಮಾತೆ" ಎಂದು ಪ್ರಾರ್ಥಿಸುವಂತೆ (ಅಂತರಾಳದಲ್ಲಿ ಇಷ್ಟವಿಲ್ಲದೆ!) ನಟಿಸುತ್ತಿದ್ದೆವು. ಎಷ್ಟೋ ಸಾರಿ ನೆರೆ ಇಳಿದು ಹೋಗುತ್ತಿತ್ತು. ಆದರೆ ಹೊಳೆ ಬೋರ್ಗರೆದು ಉಕ್ಕಿ ಹರಿದು ಎಲ್ಲೆಮೀರಿ ನಮ್ಮ ಮನೆಯ ಒಳಗೆ ನುಗ್ಗಿರುವುದನ್ನು ಹಿರಿಯರು ಸ್ಮರಿಸುತ್ತಾರೆ. ಇತಿಹಾಸ ಪ್ರಸಿದ್ಧ 1924ರ ಪ್ರವಾಹ ಸಮಯದಲ್ಲಿ ನೀರು ಮನೆಯ ಮೇಲಿನ ಜಗುಲಿಯನ್ನು ಹತ್ತಿತ್ತಂತೆ. ಭಯಭೀತರಾಗಿದ್ದರೂ ಅವರು ಮನೆಯನ್ನು ತ್ಯಜಿಸಿರಲಿಲ್ಲವಂತೆ ! ಅದೆಂಥ ಭಂಡ ಧೈರ್ಯವೋ ನಾನೀಗ ಹೇಳಲಾರೆ. ಇತ್ತೀಚೆಗೆ ಐವತ್ತರ ದಶಕದಲ್ಲಿ ಉಕ್ಕಿದ ಪ್ರವಾಹದ ನೀರು ಮನೆಯ ಮೆಟ್ಟಿಲುಗಳನ್ನು ಹತ್ತಿತ್ತಂತೆ. ಮನೆಯಲ್ಲಿದ್ದ ತುಂಬು ಗರ್ಭಿಣಿಗೆ ಅಂದೇ ಹೆರಿಗೆ ನೋವು ಶುರುವಾಗಿ ಹೆಣ್ಣು ಮಗುವಿನ ಜನನವೂ ಆಗಿಬಿಟ್ಟಿತು. ಅದಕ್ಕೆಂತಲೇ ಆ ಕನ್ಯಾಮಣಿಗೆ "ಗಂಗಾದೇವಿ" ಎಂಬ ನಾಮಕರಣವೂ ಆಗಿಬಿಟ್ಟಿತು ! ಇವನ್ನೆಲ್ಲಾ ಈಗ ಬರೆಯುವುದಾಗಲೀ, ಓದುವುದಾಗಲೀ ತೀರಾ ಹಗುರವಾಗಿ ಕಾಣಬಹುದು. ಮಲೆನಾಡಿನಲ್ಲಿ ಕಾಡುಗಳ ನಡುವಿನ ತೆರಪಾದ ಕಣಿವೆ

ಪ್ರದೇಶಗಳಲ್ಲಿ ಹುದುಗಿ ಕೂತಿರುವ ಒಂದೇ ಒಂದು ಮನೆಯ ಊರು, ಧಾರಾಕಾರ ವಾಗಿ ಸುರಿಯುತ್ತಿರುವ ಮಳೆ, ರಾತ್ರಿಯ ಕಾರ್ಗತ್ತಲ ನಡುವೆ ರಭಸದಿಂದ ನುಗ್ಗುತ್ತಿ ರುವ ನೀರು, ಬಹುಶಃ ಒಂದೋ ಎರಡೋ ಚಿಮಣಿ ಬುಡ್ಡಿಗಳ ಪಿಣುಕು ಮಿಣುಕಿನ ಬೆಳಕು, ವಯಸ್ಸಾದ ಮುದಕ ಮುದುಕಿಯರು, ಎಳೆಯ ಹಸುಗೂಸುಗಳು, ಯಾವುದೇ ನೆರವಿನ ಸಾಧ್ಯತೆ ಇಲ್ಲದ ತಾಣದಲ್ಲಿ ಅದೆಂಥಾ ಆಶಾಭಾವನೆಯಲ್ಲಿ ನಮ್ಮವರು ಕಾಲ ಹಾಕುತ್ತಿದ್ದರೆಂಬುವುದನ್ನು ಈಗಲೂ ಯೋಚಿಸಿದರೆ ಮೈ ಜುಂ ಎನ್ನುತ್ತದೆ. ಬಹುಶಃ ನಮ್ಮೂರ ಹೊಳೆಗೂ ನಮ್ಮ ಮನೆತನದವರಿಗೂ ಅನಾದಿಯಿಂದಲೂ ಇದ್ದ ನಿಕಟ ಸಂಪರ್ಕ ಹಾಗೂ ಗೌರವದ ಭಾವನೆ ಅವರಲ್ಲಿ ಧೈರ್ಯವನ್ನು ಹುಟ್ಟಿಸಿರ ಬೇಕು.

ಮೇಲಿನ ನಿದರ್ಶನಗಳನ್ನು ನೋಡಿದಾಗ ನಮ್ಮವರ ಜೀವನ ಕ್ರಮ ನಮ್ಮ ಹೊಳೆಯೊಡನೆ ಪರಸ್ಪರ ಹೊಂದಿಕೊಂಡಿರುವುದನ್ನು ನೀವು ಈಗಾಗಲೇ ಭಾವಿಸಿರ ಬಹುದು. ಅದು ನಿಜವೆ. ಹಲವು ವಿಧಗಳಲ್ಲಿ ನಮ್ಮವರ ಜೀವನ ಇವತ್ತಿಗೂ ಹೊಳೆಯನ್ನವಲಂಭಿಸಿದೆ.

ಪ್ರತಿ ವರ್ಷ ಉಕ್ಕಿ ಬಂದ ನೆರೆ ನೀರು ನಮ್ಮ ಗದ್ದೆ ಕೋಗಿನಲ್ಲಿ 2-3 ದಿನ ತಂಗಿದ್ದು ನಂತರ ನಿಧಾನವಾಗಿ ಇಳಿದು ಹೋಗುತ್ತದೆ. ನೀರು ಇಳಿದು ಹೋದರೂ ಅದರ ಜೊತೆ ಬಂದಿದ್ದ ಮೆಕ್ಕಲು ಮಣ್ಣು ಗದ್ದೆಗಳಲ್ಲಿ ಉಳಿದುಕೊಂಡು ಬಿಡುತ್ತದೆ. ಗದ್ದೆಗಳಿಗೆ ಅದಕ್ಕಿಂತ ಉತ್ತಮ ಗೊಬ್ಬರ ಬೇರಿರಲಾರದು. ಸರಿಯಾಗಿ ಗೊಬ್ಬರ ಹಾಕ ದಿದ್ದರೂ ನಮ್ಮ ಗದ್ದೆಗಳಲ್ಲಾಗುತ್ತಿದ್ದ ಉತ್ತಮ ಬೆಳೆಗೆ ಅದೇ ಕಾರಣವೆನ್ನುವುದು ನಮ್ಮ ಸುತ್ತಲ ಹಳ್ಳಿಯವರ ಅಭಿಪ್ರಾಯ. ಈಗ್ಗೆ ನೂರಾರು ವರ್ಷಗಳ ಹಿಂದೆ ಈ ಬಗೆಗೆ ಇರುವ ದಂತಕತೆಯನ್ನು ನಿಮಗೆ ಈಗಲೇ ಹೇಳಿಬಿಡುತ್ತೇನೆ. ನಮ್ಮ ಗದ್ದೆಯಲ್ಲಿ ಬೆಳೆಯುತ್ತಿದ್ದ ಭತ್ತದ ಸಸಿಯ ಕಾಳುಗಳೇ ಅಲ್ಲದೆ, ಅದರ ಖಾಂಡವೂ ಗಾತ್ರದಲ್ಲಿ ಇತರರ ಗದ್ದೆಗಳಿಗಿಂತ ಹಿರಿದಾಗಿರುತ್ತಿದ್ದುವಂತೆ. ಒಂದು ಸಾರಿ ನಮ್ಮ ಪೂರ್ವಿಕರೊಬ್ಬರು ಒಂದು ಭತ್ತದ ಸಸಿಯ ಒಂದು ಗೆಣ್ಣಿನ ಅಂತರದಿಂದ, ಇನ್ನೊಂದು ಗೆಣ್ಣಿನ ಅಂತರದವರೆಗೆ ಕತ್ತರಿಸಿ, ಅದರೊಳಗಡೆ ತುಪ್ಪವನ್ನು ತುಂಬಿದರಂತೆ. ಅದು ಒಂದು ಸೇರಿಗಿಂತಲೂ ಮಿಗಿಲಾಗಿತ್ತಂತೆ. ತಾಲ್ಲೂಕು ದಣಿಯೆಂದು ಪರಿಗಣಿಸಲ್ಪಡುತ್ತಿದ್ದ ಅಮಲ್ದಾರರಿಗೆ ಅದನ್ನು ಬಹುಮಾನವಾಗಿ ಕೊಟ್ಟರಂತೆ. ಆ ಪುಣ್ಯಾತ್ಮ ಅಮಲ್ದಾರನಿಗೆ ಅದೇನು ಹರ್ಷವಾಯಿತೋ ಅಥವಾ ಕೋಪ ಉಕ್ಕೇರಿ ಬಂದಿತೋ ತಿಳಿಯದು. ಆ ವರ್ಷದಿಂದಲೇ ನಮ್ಮ ಭೂಮಿಗೆ ಕಂದಾಯವನ್ನು ಏರಿಸಿಬಿಟ್ಟನಂತೆ ! ಇಂದಿನ ಕಾಲದಲ್ಲಾದರೆ ಕೃಷಿ ವಸ್ತುಗಳ ಪ್ರದರ್ಶನ ಸಮಾರಂಭದಲ್ಲಿಟ್ಟಿದ್ದರೆ ಸುವರ್ಣ ಪದಕ, ಕೃಷಿ ಪಂಡಿತರೆಂಬ ಬಿರುದು ಬಾವಲಿಗಳು ನಮ್ಮದಾಗಿರುತ್ತಿದ್ದವೇನೋ ?

## ಹೊಳೆ-ಬಾಳೇಕಾಯಿ ! (ಮತ್ಸ್ಯ ಪುರಾಣ)

ಹೊಳೆಯ ದೆಸೆಯಿಂದ ನಮ್ಮ ಭೂಮಿ ಫಲವತ್ತಾಗಿ ಸಮೃದ್ಧ ಬೆಳೆ ಒದಗಿಸಿ ನಮ್ಮ ಅನ್ನಾಹಾರಗಳಿಗೆ ಕಾರಣವಾಗಿರುತ್ತಿದ್ದುದೊಂದೇ ಅಲ್ಲ, ಊಟದ ರುಚಿಗೆ ಆವಶ್ಯಕವಾದ ವ್ಯಂಜನಗಳನ್ನು ಒದಗಿಸುತ್ತಿದ್ದುದು ಅದು ನಮಗೆಲ್ಲಾ ಅಚ್ಚುಮೆಚ್ಚಾಗಿರುವುದರ ಇನ್ನೊಂದು ಕಾರಣ. ನಾನೇನು ಹೇಳಲು ಹೊರಟಿರುವೆನೆಂಬುದು ನಿಮಗೆಲ್ಲಾ ಅರ್ಥವಾಗಿರಲಾರದು. ಅಂದರೆ ಊಟದ ಸಮಯದಲ್ಲಿ ರುಚಿಗಾಗಿ ಬಳಸುವ ವ್ಯಂಜನದ ಸಾಮಗ್ರಿ ಹೊಳೆ - ಬಾಳೇಕಾಯಿ - ಅರ್ಥಾತ್ ಮೀನುಗಳ ಆಗರವೂ ನಮ್ಮ ಹೊಳೆಯೇ ಆಗಿತ್ತು. ಆ ಉಪಕಾರವನ್ನು ಮರೆಯಲಾದೀತೇ. ಬಹುಪಾಲು ಹಳ್ಳಿಗಳಲ್ಲಿ ಆ ಕಾಲದಲ್ಲಿ ಮಳೆಗಾಲ ಮುಗಿದ ಒಂದೆರಡು ತಿಂಗಳುಗಳಲ್ಲಿ ಮಾತ್ರ ಮೀನುಗಳು ಸಿಗುವ ಅವಕಾಶವಿದ್ದರೆ, ನಮ್ಮವರು ವರ್ಷವೆಲ್ಲಾ ಮೀನು ದೊರೆಯುವಂತೆ ಮಾಡಿಕೊಳ್ಳುತ್ತಿದ್ದುದೇ ಅವರ ವೈಶಿಷ್ಟ್ಯ.

ಪ್ರತಿ ಮುಂಗಾರು ಮಳೆ ಆರಂಭವಾದ ಸ್ವಲ್ಪ ದಿನಗಳಲ್ಲೇ ಕಾಡುಮೇಡುಗಳಲ್ಲಿ ಧಾರಾಕಾರವಾಗಿ ಸುರಿದು ಹಂಚಿರಿಕೆ, ಹಳ್ಳಗಳ ಮೂಲಕ ಗದ್ದೆಗಳಿಗೆ ನೀರು ಧಾವಿಸುತ್ತದೆ. ಅಲ್ಲಿಂದ ಅಂತಿಮವಾಗಿ ದೊಡ್ಡ ಹಳ್ಳಗಳನ್ನೋ, ಹೊಳೆಗಳನ್ನೋ ಸೇರುತ್ತದೆ. ಅಂತಹ ಹಳ್ಳಗಳಲ್ಲಿದ್ದ ಮೀನುಗಳು ಗರ್ಭಧರಿಸಿ ಮೊಟ್ಟೆಯಿಡುವ ಸಮಯವೂ ಇದೇ ಆಗಿರುತ್ತದೆ. ಹೊಳೆಯಲ್ಲಿ ತುಂಬಿ ಹರಿಯುವ ನೀರಿನಲ್ಲಿಟ್ಟ ಮೊಟ್ಟೆಗಳು ಕೊಚ್ಚಿ ಹೋಗಿ ನಾಶವಾಗುವುದು ಖಚಿತ. ಮೀನುಗಳು ತಮ್ಮ ಸಂತಾನವನ್ನು ಉಳಿಸಿಕೊಳ್ಳಲು ಉಪಾಯ ಹುಡುಕಿಕೊಂಡಂತಿವೆ. ಹಳ್ಳಗಳಿಂದ ಹೊಳೆ ನದಿಗಳಿಗೆ ಹರಿದು ಬರುವ ನೀರಿನ ವಿರುದ್ಧ ಪ್ರಯಾಣ ಮಾಡಿ ಹೆಚ್ಚು ನೀರು ಇರದ ಗದ್ದೆಗಳತ್ತ ಧಾವಿಸುತ್ತವೆ. ಅಲ್ಲಿ ಮೊಟ್ಟೆಗಳನಿಟ್ಟು ಮತ್ತೆ ಮೂಲ ನದಿಗೆ ಹಿಂದಿರುಗುವ ಹುನ್ನಾರ ಅವುಗಳದ್ದು. ಜೂನ್ ತಿಂಗಳ ಒಂದೆರಡು ರಾತ್ರಿಗಳಲ್ಲಿ ಈ 'ಹತ್ತು-ಮೀನು'ಗಳ ಭೇಟೆ ತುಂಬಾ ರೋಚಕವಾಗಿರುತ್ತದೆ.

ಈ ರೀತಿಯ ಮೀನುಗಳು ಗದ್ದೆಗಳ ಕಡೆಗೆ ಹತ್ತಿಬರುವುದು ಸಾಮಾನ್ಯವಾಗಿ ಕತ್ತಲಾಗುವ ಸಮಯಕ್ಕೆ. ಸಮಯವನ್ನು ಎದಿರುನೋಡುತ್ತಿದ್ದ ಜನ ಅಂತಹ ಸೂಚನೆ ದೊರೆಯುತ್ತಿದ್ದಂತೆಯೇ ಕೈಯಲ್ಲಿ ದೊಣ್ಣೆ, ಕತ್ತಿ, ಬುಟ್ಟಿಗಳನ್ನು ಹಿಡಿದುಕೊಂಡು ಗದ್ದೆಗಳತ್ತ ಧಾವಿಸುತ್ತಾರೆ. ಅವರ ಜತೆಗೆ ಇನ್ನೂ ಕೆಲವರು ಲಾಟೀನು, ದೊಂದಿ, ಟಾರ್ಚು ಮುಂತಾದ ಬೆಳಕಿನ ಸಾಮಗ್ರಿಗಳನ್ನೂ ಹಿಡಿದು ಹೋಗುತ್ತಾರೆ. ಚುಮ ಚುಮ ಮಳೆ ಗಾಳಿಗಳಿದ್ದರೂ ಯಾರೂ ಗಮನಕ್ಕೆ ತೆಗೆದುಕೊಳ್ಳುವುದೇ ಇಲ್ಲ. ಸುಮಾರು ಕಾಲು ಮುಚ್ಚುವ ನೀರಿನಲ್ಲಿ ಮೀನುಗಳು ಗರಬಡಿದವರಂತೆ ಮೇಲೇರಿ ಬರುತ್ತಿರುತ್ತವೆ. ಕೆಲವನ್ನು ಕೈಯಲ್ಲೇ ಹಿಡಿದು ಬುಟ್ಟಿಗೆ ಹಾಕಿಕೊಳ್ಳಲು ಸಾಧ್ಯ. ಮತ್ತೆ ಕೆಲವನ್ನು ದೊಣ್ಣೆ, ಕತ್ತಿಗಳಿಂದ ಕಡಿದು ಗಾಯ ಮಾಡಿ ಒದ್ದಾಡುವಾಗ ಹಿಡಿದುಕೊಳ್ಳುತ್ತಾರೆ. ಅದೊಂದು ವಿಚಿತ್ರ ಹಿಂಸೆಯೆನ್ನುವುದರಲ್ಲಿ

ಸಂಶಯವಿಲ್ಲ. ಆದರೆ ಅದರಲ್ಲೇ ತಲ್ಲೀನರಾದವರಿಗಾಗಬಹುದಾದ ಸಂತೋಷವನ್ನು ಬಲ್ಲವರೇ ಬಲ್ಲರು. ಮರುದಿನದ ಭೋಜನ ಸಮಯದ ಆನಂದದಲ್ಲಿ ಅವರೆಲ್ಲಾ ಪರವಶರಾಗಿರುವಾಗ ಮಿಕ್ಕ ವಿಷಯಗಳೆಲ್ಲಾ ಗೌಣ. ಸಾಮಾನ್ಯವಾಗಿ ಬೇಸಿಗೆ ರಜೆಯ ಅಂತಿಮ ದಿನಗಳಲ್ಲಿ ಜರುಗುವ ಈ ಸಂಭ್ರಮದಲ್ಲಿ ಕೆಲವು ಸಾರಿ ನಾನೂ ಆ ಸಂತೋಷದಲ್ಲಿ ಭಾಗಿಯಾಗುತ್ತಿದ್ದ ನೆನಪಿದೆ.

## ಯಾಪೆ ಹಾಕುವುದು

ಇನ್ನು, 2-3 ತಿಂಗಳು ಮಳೆ ಜುರ್ರೆಂದು ಸುರಿಯುತ್ತಿರುತ್ತದೆ. ರೈತರು ಗದ್ದೆ ತೋಟಗಳು ಕೆಲಸ ಕಾರ್ಯಗಳಲ್ಲಿ, ತಲ್ಲೀನರಾಗಿಬಿಡುತ್ತಾರೆ. ಮಳೆಗಾಲ ಮುಗಿಯುತ್ತಾ ಬರುವಷ್ಟರಲ್ಲೇ ರೈತರ ಕೆಲಸ ಕಾರ್ಯಗಳು ಅಂತಿಮ ಘಟ್ಟವನ್ನು ತಲುಪುತ್ತವೆ. ಮತ್ತೆ ಮೀನಿನ ಶ್ರಾಯವೂ ಆರಂಭವಾಗುತ್ತದೆ. ಮುಂಗಾರಿನ ಆರಂಭದ ಸಮಯದಲ್ಲಿ ಹತ್ತು-ಮೀನುಗಳನ್ನು ಜನರು ಹಿಡಿಯಲು ಪ್ರಯತ್ನಿಸಿದ್ದರು. ಅವರ ಗಮನ ತಪ್ಪಿಸಿಕೊಂಡು ಬಹಳಷ್ಟು ಮೀನುಗಳು ಗದ್ದೆಗಳಲ್ಲಿ ಮೊಟ್ಟೆ ಇಟ್ಟು ಹಿಂದಿರುಗಿರುತ್ತವೆ. ಹಾಗೆ ಉದ್ಭವಿಸಿದ ಮೀನು ಮರಿಗಳು ಗದ್ದೆಯಲ್ಲಿ ಬೆಳೆದು ಯಥೇಚ್ಛವಾಗಿ ಲಭ್ಯವಿರುತ್ತವೆ. ಮಳೆ ಬರುವುದು ಕಡಿಮೆಯಾದಂತೆಲ್ಲಾ ಗದ್ದೆಗಳಲ್ಲಿ ನೀರಿನ ಮಟ್ಟ ಕಡಿಮೆಯಾಗುತ್ತಿರುವುದು ಮೀನುಗಳಿಗೂ ತಿಳಿಯುತ್ತದೇನೋ. ಅವು ಮತ್ತೆ ಹೆಚ್ಚು ನೀರು ಇರಬಹುದಾದ ಹೊಳೆ ಹಳ್ಳಗಳತ್ತ ಪ್ರಯಾಣಕ್ಕೆ ಸನ್ನದ್ಧವಾಗುತ್ತವೆ. ಅಂದರೆ "ಇಳೀ-ಮೀನು" ಶ್ರಾಯ ಆರಂಭವಾಗುತ್ತದೆ. ತಮ್ಮ ತಮ್ಮ ಗದ್ದೆಗಳಿಂದ ಮೀನುಗಳು ಪ್ರಯಾಣ ಮಾಡುವ ತಾಣವನ್ನು ಗುರುತಿಸಿ ಅವುಗಳನ್ನು ಹಿಡಿಯುವ ಪ್ರಯತ್ನ ಮಾಡುತ್ತಾರೆ. ಆ ಸಲುವಾಗಿ "ಯಾಪೆ"ಯೆಂಬ ವ್ಯವಸ್ಥೆಯೊಂದನ್ನು ಏರ್ಪಡಿಸುತ್ತಾರೆ. ಮಲೆನಾಡಿನಲ್ಲಿ ಬೇಯಿಸಿದ ಅಡಿಕೆ ಹೋಳುಗಳನ್ನು ಒಣಗಿಸಲು ಹಾಕುವ ಬಿದಿರಿನ ಎಳೆಗಳಿಂದ "ತಟ್ಟಿ" ಎಂಬ ಚಾಪೆ ತರಹೆಯ ಆಕೃತಿಯನ್ನು ಮಾಡಿಕೊಂಡಿರುತ್ತಾರೆ. ಗದ್ದೆಗಳಿಂದ ನೀರು ಅಂತಿಮವಾಗಿ ಹೊರ ಹೋಗುವ ಜಾಗದಲ್ಲಿ ಅದನ್ನು ಅಳವಡಿಸಲಾಗುತ್ತದೆ. ಅದರ ಮೂಲಕ ಹರಿಯುವ ನೀರು ಇನ್ನೊಂದು ಕೊನೆಯಲ್ಲಿ ಅಳವಡಿಸಿದ ಎತ್ತರದ ಬುಟ್ಟಿಯೊಂದಕ್ಕೆ ಬೀಳುವ ವ್ಯವಸ್ಥೆ ಮಾಡಿರುತ್ತಾರೆ. ತಟ್ಟೆಯ ಮೇಲೆ ಹರಿದು ಬರುವ ನೀರಿನ ಮೂಲಕ ಮೀನುಗಳೂ ಸೇರಿಕೊಂಡಿದ್ದು ಅಂತಿಮವಾಗಿ ಬುಟ್ಟಿಯೊಳಗಡೆ ಬಿದ್ದು ಶೇಖರವಾಗುತ್ತಿರುತ್ತವೆ. ಯಾಪೆಯ ತಟ್ಟಿ ಮತ್ತು ಬುಟ್ಟಿ ಸಹಾ ತುಂಬಾ ಜಾಳಾದ ಎಳೆಗಳಿಂದ ಹೆಣೆದಿರುವುದರಿಂದ ಬಹುಪಾಲು ನೀರು ಸೋರಿ ಹೋಗಿ ಬುಟ್ಟಿಯಲ್ಲಿ ಅಂತಿಮವಾಗಿ ಬರೇ ಮೀನುಗಳು ಶೇಖರವಾಗಿರುತ್ತವೆ. ನಮ್ಮೂರಿನ ಇಡೀ ಗದ್ದೆ ಕೋಗಿನ ನೀರೆಲ್ಲಾ ಅಂತಿಮವಾಗಿ ಹೊಳೆ ಸೇರುವ ಮೊದಲು ನಮ್ಮ ಗದ್ದೆಯೊಂದರ ಮೂಲಕವೇ ಹರಿಯಬೇಕಾಗುತ್ತದೆ. ಹೊಸಾಳಿ ಎಂಬ ಆ ಗದ್ದೆಯ ಅಂತಿಮ ಭಾಗದಲ್ಲಿ ನಮ್ಮವರು ಯಾಪೆಯನ್ನು ಹೂಡುತ್ತಿದ್ದರು. ಮಳೆ ಕಡಿಮೆಯಾಗಿ

ಬಿಸಿಲಿನ ತಾಪ ಹೆಚ್ಚುತ್ತಾ ಬಂದಂತೆಲ್ಲಾ ಮೀನುಗಳು ಹಿಂಡು ಹಿಂಡಾಗಿ ಅತ್ಯವಸರದಿಂದ ಹೊಳೆ ಕಡೆ ಧಾವಿಸಲು ಓಡೋಡಿ ಬಂದು ನಮ್ಮ ಯಾಪೆಯ ಮುಖಾಂತರ ಬುಟ್ಟಿಯಲ್ಲಿ ಶೇಖರವಾಗುತ್ತವೆ. ನಾ ಮುಂದು ತಾ ಮುಂದು ಎಂಬ ಅವಸರದಿಂದ ಅವು ಯಾಪೆಯ ಮೇಲೆ ಜಿಗಿದಾಡುತ್ತಾ ಬುಟ್ಟಿಗೆ ಬೀಳುವುದನ್ನು ನೋಡುವ ನಮಗೆಲ್ಲಾ ಎಲ್ಲಿಲ್ಲದ ಆನಂದ ! (ಈಗ ಯೋಚಿಸಿದರೆ ಕನಿಕರ ಉಕ್ಕಿಬರುತ್ತದೆ). ಅಂತಿಮ ದಿನಗಳಲ್ಲಿ ದಿನಕ್ಕೆ ನಾಲ್ಕಾರು ಸಾರಿ ಬುಟ್ಟಿ ಖಾಲಿ ಮಾಡಬೇಕಾಗುತ್ತಿತ್ತು. ರಾತ್ರಿಯೂ ಕಾಯ್ದು ಕೂತು ಮೀನುಗಳನ್ನು ಹೆಕ್ಕಿ ತರಬೇಕಾಗುತ್ತಿತ್ತು. ಹಾಗೆ ಕಾಯದಿದ್ದರೆ ಕದ್ದು ತೆಗೆದುಕೊಂಡು ಹೋಗುವವರಿಗೇನೂ ಕಡಿಮೆ ಇರಲಿಲ್ಲ. ಅವರು ರಾತ್ರಿ ಬರಬಹುದಾದ ದಾರಿಗಳಲ್ಲಿ ಮುಳ್ಳು ನೆಟ್ಟಿರುವುದು ಇಲ್ಲವೇ ಅವರಿಗೆ ಕೆಡಕಾಗುವಂತೆ ಭೂತರಾಯನಿಗೆ ಹರಕೆ ಇಟ್ಟುಕೊಳ್ಳುತ್ತಿದ್ದರೂ ಕೂಡ! ಅಂದರೆ ಮೀನಿನ ರುಚಿಯ ಗೀಳು ಎಷ್ಟಿರುತ್ತಿತ್ತೆಂಬುದರ ಅಂದಾಜು ತಮಗಾಗಬಹುದು. ದಸರಾ ರಜಾದ ಅಂತಿಮ ದಿನಗಳಲ್ಲಿ ನಾನು ಊರಲ್ಲೇ ಇರುವ ಸಂದರ್ಭ ಅದು. ನನಗೆ ಪ್ರಿಯವಾದ ಅವಲು ಮೀನು, ಮರುಗುಂಡು ಮೀನುಗಳ ರುಚಿ, ರಜೆ ಮುಗಿದರೂ ಕೆಲ ದಿನಗಳು ಊರಲ್ಲೇ ಹಿಡಿದಿರಿಸುತ್ತಿದ್ದುದು ಅಚ್ಚರಿಯೇನಲ್ಲ.

ಮಲೆನಾಡು ಪ್ರದೇಶ ಸಮುದ್ರದ ಕರಾವಳಿಯಿಂದ ಬಹಳ ದೂರದಲ್ಲಿರುವುದಾದರೂ ಇತ್ತೀಚಿನ ದಿನಗಳಲ್ಲಿ ಪ್ರತಿದಿನ ಮೀನು ದೊರೆಯುವ ಅವಕಾಶಗಳಿವೆ. ಬೆಳಗಿನ 9-10 ಗಂಟೆಗಳೊಳಗೇ ಸಮುದ್ರದ ಮೀನು ಮಾರುವವರ ತಂಡೋಪ ತಂಡಗಳು ಮಲೆನಾಡಿನ ಮೂಲೆ ಮೂಲೆಗಳನ್ನು ತಲುಪುತ್ತವೆ. ತಲೆ ಮೇಲೆ ಹೊತ್ತುಕೊಂಡೋ, ಬೈಸಿಕಲ್ಲು ಏರಿಕೊಂಡೋ ಮೀನು ಮಾರುವವರು ಅಲ್ಲೆಲ್ಲಾ ಹಾಜರಾಗಿಬಿಡುತ್ತಾರೆ. ಇಂದಿನ ಬಹುಪಾಲು ಗೃಹಿಣಿಯರು. ಅವರು ಬರುವ ಸಮಯವನ್ನು ಕಾದು ನೋಡಿದ ನಂತರವೇ ಆ ದಿನದ ಪಲ್ಯದ ಬಗೆಗೆ ನಿರ್ಧಾರ ಮಾಡುತ್ತಾರೆ! ಅರ್ಧ ಶತಮಾನದ ಹಿಂದೆ ಈ ಸೌಕರ್ಯವಿರಲಿಲ್ಲ. ಈ ಪ್ರದೇಶದ ಬಹುಪಾಲು ಜನರಿಗೆ ಮಳೆಗಾಲ ಕಳೆದ ನಂತರ ಮುಂದಿನ ಮಳೆಗಾಲ ಆರಂಭವಾಗುವವರೆಗೂ ಮೀನು ಸಿಗುವ ಅವಕಾಶವಿರುತ್ತಿರಲಿಲ್ಲ. ಆದರೆ ಹೊಳೆಗದ್ದೆಯವರು ಬೇಸಿಗೆಯಲ್ಲೂ ಸಮೃದ್ಧಿಯಾಗಿ ಮೀನು ಒದಗಿಸಿಕೊಳ್ಳುತ್ತಿದ್ದರು! ನಾನಾ ರೀತಿಗಳಲ್ಲಿ ಮೀನು ಹಿಡಿಯುವ ಕಲೆಯನ್ನು ನಮ್ಮವರು ಕರತಲಾಮಲಕ ಮಾಡಿಕೊಂಡಿದ್ದರಿಂದ ಇದು ಸಾಧ್ಯವಾಗಿತ್ತು.

ಮೀನು ಹಿಡಿಯುವ ಹವ್ಯಾಸ ನಮ್ಮವರಿಗೆ ಹೇಗೆ ರೂಢಿಯಾಗಿಬಿಟ್ಟಿತ್ತೆಂಬುದರ ಅರಿವು ನನಗಿಲ್ಲ. ನನಗೆ ಜ್ಞಾಪಕ ಬರುವಷ್ಟು ಕಾಲದಿಂದಲೂ ಅವರು ಮೀನು ಹಿಡಿಯುತ್ತಲೇ ಇದ್ದರು. ಈ ಬಗೆಗೆ ಅವರು ಮೂರ್‍ನಾಲ್ಕು ವಿಧಾನಗಳನ್ನು ಅನುಸರಿಸುತ್ತಿದ್ದರು. ಈ ವಿಧಾನಗಳನ್ನು ಅನುಸರಿಸುವ ಮೊದಲು ಬಹಳಷ್ಟು ಪೂರ್ವ ಸಿದ್ಧತೆಗಳಾಗುತ್ತಿದ್ದವು. ಮೊದಲನೆಯದಾಗಿ ಮೀನುಗಳು ಹೊಳೆಯ ಯಾವ ಯಾವ ತಾಣಗಳಲ್ಲಿ ಗುಂಪು

ಗುಂಪಾಗಿ ಚಲಿಸುತ್ತಿರುತ್ತವೆಂಬುದನ್ನು ಅಂದಾಜು ಮಾಡಿಕೊಳ್ಳಬೇಕು. ಅವಲು ಮೀನುಗಳಂಥ ಹಿರಿಯ ಗಾತ್ರದ ಮೀನುಗಳು ಸಾಮಾನ್ಯವಾಗಿ ನಿಗದಿತ ಕಡೆ ಸ್ವಾಭಾವಿಕ ಪರಿಸರವಿರುವ ಕಡೆ ತಂಗುತ್ತವೆ ; ಅಲ್ಲೇ ಆಸುಪಾಸಿನಲ್ಲಿ ತಮ್ಮ ಮರಿಗಳನ್ನು ಆಡಿಸುತ್ತಿರುತ್ತವೆ. ಹತ್ತಿರದ ಬಂಡೆಗಳ ಅಡಿಯ ಪೊಟರೆ ಅಥವಾ ನೀರಿಗೆ ಹೊಂದಿಕೊಂಡಿರುವ ದೊಡ್ಡ ಮರದ ಬೇರುಗಳ ಸಂದುಗೊಂದುಗಳಲ್ಲಿ ತಂಗುತ್ತವೆ. ಈ ವಿದ್ಯಮಾನಗಳನ್ನು ಅರಿತುಕೊಳ್ಳಲು ನಮ್ಮಲ್ಲಿ ಕೆಲವರು ಹೊಳೆಯ ದಂಡೆಯಲ್ಲಿ ಸದ್ದುಗದ್ದಲವಿಲ್ಲದೆ ನಾಲ್ಕಾರು ಸಾರಿ ತಿರುಗಾಡಿ, ಏಕಾಗ್ರತೆಯಿಂದ ತೀಕ್ಷ್ಣ ದೃಷ್ಟಿ ಬೀರಿ ಮೀನುಗಳಿರುವ ತಾಣಗಳನ್ನು ಖಚಿತಪಡಿಸಿಕೊಳ್ಳುತ್ತಿದ್ದರು. ಸಂಗ್ರಹಿಸಿದ ಮಾಹಿತಿಗಳನ್ನು ಎಲ್ಲರೂ ಚರ್ಚೆ ನಡೆಸಿ ಅನುಸರಿಸಬೇಕಾದ ವಿಧಾನವನ್ನು ನಿರ್ಧರಿಸುತ್ತಿದ್ದರು.

## ಅಂಡೆ ಹಾಕುವುದು

ಯಾವುದೋ ಒಂದು ತಾಣವಲ್ಲಿ ಒಂಟಿ ಮೀನು ಆಗಾಗೆ ಕಂಡುಬರುತ್ತಿದ್ದರೆ ಅದನ್ನು ಹಿರಿಯಲು "ಅಂಡೆ ಹಾಕುವ" ವಿಧಾನವನ್ನು ಅನುಸರಿಸುವುದುಂಟು. ಮುರಿದು ಬಿದ್ದ ಅಡಿಕೆ ಮರದ ಸುಮಾರು 5-6 ಅಡಿಗಳಷ್ಟು ಉದ್ದ ತುಂಡಿನೊಳಗಡೆಯ ತಿರುಳನ್ನು ಮೊದಲು ತೆಗೆಯಲಾಗುತ್ತದೆ. ಅಂತಹ ಹಲವಾರು ಅಂಡೆಗಳನ್ನು ಹೊಳೆಯ ಉದ್ದಕ್ಕೂ ದಡದ ಹತ್ತಿರದಲ್ಲಿ ಮುಳುಗಿಸಿಡುತ್ತಾರೆ. ಕೆಲವು ದಿನ ಅವುಗಳ ತಂಟೆಗೆ ಹೋಗದೆ ಹಾಗೇ ಬಿಟ್ಟಿರುತ್ತಾರೆ. ಅವಲುಮೀನುಗಳು ತಂಗಲು ಅವು ಪ್ರಶಸ್ತ ತಾಣವಾಗಿ ಪರಿಣಮಿಸುತ್ತವೆ. ಅವುಗಳಿಗೆ ಹಾಗೆ ತಂಗುವುದು ಅಭ್ಯಾಸವಾಗಿರುವುದು ಖಚಿತವಾದ ನಂತರ ಒಂದು ಮುಂಜಾನೆ ಎರಡು ಜನ ಹೊಳೆ ಕಡೆ ಹೆಜ್ಜೆ ಹಾಕುತ್ತಾರೆ. ಅಂಡೆಗಳನ್ನು ಮುಳುಗಿಸಿಟ್ಟ ಜಾಗದ ನಿಕಟ ಪರಿಚಯ ಅವರಿಗಿರಬೇಕಾಗುತ್ತದೆ. ಅವರಿಬ್ಬರು ಸದ್ದು ಮಾಡದೆ ಅಂಡೆ ಇರುವ ಜಾಗವನ್ನು ತಲುಪುತ್ತಾರೆ. ಅಂಡೆಯ ಒಂದೊಂದು ತುದಿಯ ಬಾಯಿಯನ್ನು ತಮ್ಮ ಕೈಯಿಂದ ಮುಚ್ಚಿ ಹಿಡಿದುಕೊಂಡು ಅದನ್ನೂ ಮೇಲೆತ್ತುತ್ತಾರೆ. ಹಾಗೆಯೇ ಅದನ್ನು ಹಿಡಿದುಕೊಂಡು ದಡ ಹತ್ತುತ್ತಾರೆ. ದಡದಲ್ಲಿ ಅಂಡೆಯನ್ನು ನೆಲಕ್ಕೆ ಹಾಕಿದಾಗ ಅದರೊಳಗೆ ಸೇರಿಕೊಂಡಿದ್ದ ಮೀನು ಹೊರಗೆ ನೆಗೆದು ಹಾರಿ ಹಾರಿ ಬೀಳಲಾರಂಭಿಸುತ್ತದೆ. ತಕ್ಷಣ ಅದನ್ನು ಹಿಡಿದು ಸಾಯಿಸಿಬಿಡುತ್ತಾರೆ. ಹಾಗೆ ನಾಲ್ಕಾರು ಅಂಡೆಗಳನ್ನು ಎತ್ತಿದರೆ ಅಂದಿನ ಖರ್ಚಿಗೆ ಸಾಕಾಗುವಷ್ಟು ಮೀನು ದೊರೆಯುವುದರಲ್ಲಿ ಸಂದೇಹವಿಲ್ಲ. ಪ್ರತಿ ಅಂಡೆಯಲ್ಲೂ ಮೀನು ಇರುವುದಿಲ್ಲ ; ಹಾಗೂ ಕೆಲ ಸಾರಿ ನೀರುಹಾವುಗಳು ಅಂಡೆಗಳಲ್ಲಿ ಸೇರಿಕೊಂಡಿದ್ದು ಅಪಾಯವಾಗುವ ಸಂದರ್ಭಗಳೂ ಇರುವುದುಂಟು. ವೈಯಕ್ತಿಕವಾಗಿ ನಾನು ಈಗಲೂ ನೆನಪಿಸಿಕೊಳ್ಳುವಂತಹ ಪ್ರಸಂಗವನ್ನು ಈಗ ಹೇಳಿಬಿಡುತ್ತೇನೆ. ಮೈಸೂರಿಗೆ ಹೋಗಿ ಮೆಡಿಕಲ್ ಕಾಲೇಜಿನ ಇಂಟರ್ ವ್ಯೂ ಮುಗಿಸಿ ಸೀಟು ಗಿಟ್ಟಿಸಿಕೊಂಡು ಊರಿಗೆ ಹಿಂದಿರುಗಿದ ಸಮಯ. (1950). ಮರುದಿನ ಬೆಳಿಗ್ಗೆ ನನ್ನ ಮೆಚ್ಚಿನ ಸಂಗಾತಿ ಹಾಗೂ ಚಿಕ್ಕಪ್ಪ

ಪುಟ್ಟಯ್ಯ, ನನ್ನನ್ನು ಹೊಳೆಗೆ ಕರೆದುಕೊಂಡು ಹೋದ. ಒಂದು ಅಂಡೆಯನ್ನು ಎತ್ತಿ ದಂಡೆಯ ಮೇಲೆ ಹಾಕುತ್ತಿರುವಾಗ ಅದರ ತುದಿಯ ಚೂಪಾದ ಅಂಚು ನನ್ನ ಎಡಗೈ ಕಿರುಬೆರಳಿನ ತುದಿಗೆ ತಾಗಿ ರಕ್ತ ಸುರಿಯಲಾರಂಭಿಸಿತು. ಅಲ್ಲಿ ಬಹಳ ಒಳಗಡೆ ಕತ್ತರಿಕೆ ಯನ್ನೇ ಉಂಟುಮಾಡಿತ್ತು. ತಕ್ಷಣ ಯಾವುದೋ ಬಟ್ಟೆಯನ್ನು ಹರಿದು ಕಟ್ಟಿದ. ಗಾಯ ಮುಂದಿನ ಒಂದು ವಾರದಲ್ಲಿ ಯಾವುದೇ ತೊಡಕಿಲ್ಲದೇ ವಾಸಿಯಾಯಿತು. ಆದರೆ ಎಡ ಕಿರುಬೆರಳಿನ ತುದಿಯಲ್ಲಿ ಕೂದಲೆಳೆ ಗಾತ್ರದ ಕಲೆ ಉಳಿದುಕೊಂಡಿದ್ದು ಇಂದಿಗೂ ನಮ್ಮೂರಿನ ನೆನಪನ್ನು ಹಸಿರಾಗಿರಿಸಿದೆ !

## ಕೂಣಿ ಹಾಕುವುದು

ಅಂಡೆಯಂತೆಯೇ ಮೀನು ಹಿಡಿಯಲು ನಮ್ಮವರು ಬಳಸುತ್ತಿದ್ದುದು - "ಕೂಣಿ" ಹಾಕುವ ವಿಧಾನ. ಕೂಣಿಯನ್ನು ಶಬ್ದಸಂಪತ್ತಿನಿಂದ ವಿವರಿಸಿ ಅರ್ಥ ಮಾಡಿಸುವುದು ಕಷ್ಟದ ಕೆಲಸ. ಸುಮಾರು 4-5 ಅಡಿಗಳ ಬೃಹದಾಕಾರದ ದುಂಡನೆಯ ಆಕೃತಿ ಅದಾಗಿರುತ್ತದೆ. ನೂರಾರು ಕಡ್ಡಿಗಳನ್ನು ಒಂದು ಕಡೆ ಸೇರಿಸಿ ಕಟ್ಟಿರುವ ಗೂಡೆಯಂತಹ ಸಲಕರಣೆ. ಪೊರಕೆ ಕಡ್ಡಿಗಳ ಗಾತ್ರದ ಬಿದಿರು ಕಡ್ಡಿಗಳನ್ನು ತಯಾರಿಸಿ ಅವುಗಳನ್ನು ಒಂದಕ್ಕೊಂದು ಸೇರುವಂತೆ ಕಾಡಿನ ಬಳ್ಳಿಯೊಂದರಿಂದ ಹೆಣೆದು ಸೇರಿಸುತ್ತಾರೆ. ಅವುಗಳ ನಡುವೆ ಸುಮಾರು ಕಾಲು ಅಂಗುಲದಷ್ಟು ಜಾಗವಿರುವಂತೆ ಹೆಣಿಗೆ ಮಾಡಿರುತ್ತಾರೆ. ಸುಮಾರು 1-2 ಅಂಗುಲಗಳ ಅಂತರದಲ್ಲಿ ಹಲವು ಬಾರಿ ಸುತ್ತು ಬರುವ ಹೆಣಿಗೆ ಮಾಡುತ್ತಾರೆ. ಅದರ ಒಂದೇ ತುದಿಯ ಕಡ್ಡಿಗಳನ್ನೆಲ್ಲಾ ಸೇರಿಸಿ ಜುಟ್ಟು ಕಟ್ಟುವಂತೆ ತಾತ್ಕಾಲಿಕವಾಗಿ ಕಟ್ಟಲಾಗುತ್ತದೆ. ಇನ್ನೊಂದು ತುದಿ ಅಗಲವಾಗಿ ಬಾಯಿ ತೆರೆದುಕೊಂಡಿರುತ್ತದೆಯಷ್ಟೆ. ಆ ಕಡೆಯಿಂದ ಅದೇ ತರಹದ ಬಿದಿರು ಕಡ್ಡಿಗಳಿಂದ ತ್ರಿಕೋಣಾಕೃತಿಯ ಇನ್ನೊಂದು ಆಕೃತಿಯನ್ನು ಒಳಗಡೆ ಸೇರಿಸಿ ಬಳ್ಳಿಯ ಹಗ್ಗದಿಂದ ಹೆಣಿಗೆ ಮಾಡಿ ಸೇರಿಸಿಬಿಡುತ್ತಾರೆ. ಲಾಳಿಕೆ ಆಕಾರದ ಅದರ ಕಿರಿದಾದ ತುದಿ ಮೊದಲು ವಿವರಿಸದ ಗೂಡೆಯ ಹೊಟ್ಟೆಯವರೆಗೂ ನುಸುಳಿರುತ್ತದೆ. ಹಿಂದಿನ ಕಾಲದಲ್ಲಿ ಚಾಲ್ತಿಯಲ್ಲಿರುತ್ತಿದ್ದ ಮಸಿಕುಡಿಕೆ "ದೌತಿ"ಯ ನಿಯಮ ಅದರಿಂದುಂಟಾಗುತ್ತದೆಂಬ ಹೋಲಿಕೆ ಮಾಡಬಹುದು. ಹೊಳೆ ನೀರಿನಲ್ಲಿ ಮುಳುಗಿಸಿಟ್ಟಾಗ ಸ್ವಲ್ಪ ದೊಡ್ಡ ಗಾತ್ರದ ಮೀನುಗಳು ಅದರೊಳಗೆ ಸಲೀಸಾಗಿ ನುಸುಳಿ ಹೋಗಬಹುದು. ಆದರೆ ಲಾಳಿಕೆಯ ತುದಿ ಬಹಳ ಕಿರಿದಾಗಿರುತ್ತಿದ್ದುದರಿಂದ ಅವು ಹೊರಗಡೆ ಬರಲಾಗುವುದಿಲ್ಲ. ಅಂಡೆಯಂತೆ ಅವುಗಳನ್ನು ಅಲ್ಲಲ್ಲೇ ಹೊಳೆಯ ನೀರಿನಲ್ಲಿ ಮುಳುಗಿಸಿಟ್ಟರೆ, ಅವಲು ಮೀನು, ಮುರುಗುಂಡು, ಕರ್ಷೆಗಳಂತ ದೊಡ್ಡ ಮೀನುಗಳು ಅದರಲ್ಲಿ ಸೇರಿಕೊಳ್ಳುವುದು ಸರ್ವೇ ಸಾಧಾರಣ. ಕೂಣಿಯನ್ನು ದಡಕ್ಕೆ ತಂದು ಹಿಂದೆ ಕಟ್ಟಿದ ಜುಟ್ಟನ್ನು ಬಿಚ್ಚಿ ಮೀನುಗಳನ್ನು ಹೊರಗೆ ತೆಗೆಯಲಾಗುತ್ತದೆ. ಮಲೆನಾಡಿನಲ್ಲಿ ಕೆಲವರು ಅಂತಹ ಕೂಣಿಗಳನ್ನೆ ತಯಾರಿಸಿ ಕೊಡುವವರಿರುತ್ತಿದ್ದರು. ಆದರೆ ನಮ್ಮ ಮನೆಯವರೇ ಅಂತಹವುಗಳನ್ನು ಸ್ವಂತಕ್ಕಾಗಿ

ತಯಾರಿಸಿಕೊಳ್ಳುವ ನಿಪುಣರಾಗಿರುತ್ತಿದ್ದರು. ಆಯಕಟ್ಟಿನ ಕಡೆ ನೀರಿನಲ್ಲಿ ಮುಳುಗಿಸಿಟ್ಟಾಗ ಹತ್ತಾರು ಮೀನುಗಳು ಒಂದೇ ಸಾರಿ ಸಿಗುವುದು ಅಪರೂಪವೇನಲ್ಲ.

ನಮ್ಮ ಮನೆಯ ಹತ್ತಿರವೇ ಹೊಳೆ ಹರಿಯುತ್ತಿದ್ದರಿಂದ ಕೂಣಿಗಳನ್ನು ಬಳಸುವ ಅವಕಾಶ ಇನ್ನೊಂದು ರೀತಿಯಲ್ಲಿ ಜಾರಿಗೆ ಬರುತ್ತಿತ್ತು. ಮಳೆಗಾಲ ಶುರುವಾದಾಗ ಹೊಳೆಯಲ್ಲಿ ಅಲ್ಪ ಮಟ್ಟ ನೀರು ಇರುವಾಗಲೂ, ಹಾಗೇ ಮಳೆ ನಿಂತು ಹೊಳೆ ನೀರು ಕಡಿಮೆಯಾಗುತ್ತಿರುವಾಗಲೂ ಹೊಳೆಯಲ್ಲಿ ಹರಿಯುವ ನೀರಿಗೆ ಅಡ್ಡಗಟ್ಟೆ ಹಾಕಲು ಸಾಧ್ಯ. ಹೊಳೆಯಲ್ಲಿ ಸುಮಾರು ಸೊಂಟ ಮುಟ್ಟುವವರೆಗೆ ನೀರು ಇರುವ ಹಂತದಲ್ಲಿ ಕೆಲವು ಹಸಿಗಿಡಗಳನ್ನು ಕಡಿದು ಅಡ್ಡಲಾಗಿ ನೀರಲ್ಲಿ ಹುಗಿದು ನಿಲ್ಲಿಸುತ್ತಾರೆ. ಅಂದರೆ ಪೂರ್ತಿಯಾಗಿ ನೀರನ್ನು ತಡೆಹಿಡಿಯುವುದು ಇದರ ಉದ್ದೇಶವಲ್ಲ. ಸಾಮಾನ್ಯವಾಗಿ ಹರಿಯುವ ನೀರಿಗೆ ಅದರಿಂದ ಹೆಚ್ಚಿನ ತಡೆಯಾಗುವುದಿಲ್ಲ. ಹಸಿ ಗಿಡಗಳನ್ನು ಹೊಳೆಯಲ್ಲಿರುವ ಬಂಡೆಗಳು ಮತ್ತು ಅಲ್ಲೇ ಸ್ವಾಭಾವಿಕವಾಗಿ ಬೆಳೆದುಕೊಂಡಿರುವ ಗಿಡಗಳನ್ನೇ ಸೇರಿಸಿ ಸ್ವಲ್ಪ ಜಾಳಾಗಿ ಕೂಡಿಸಿ ಮೂರು-ನಾಲ್ಕು ಸಾಲುಗಳಲ್ಲಿ ಬಳ್ಳಿಗಳಿಂದ ಬಿಗಿಯುತ್ತಾರೆ. ಅದರಿಂದ ಸಂದುಗೊಂದುಗಳಲ್ಲಿ ನೀರು ಹರಿಯುತ್ತಲೇ ಇರುತ್ತದೆ. ಆದರೆ ಅವಲು ಮೀನು ಮತ್ತು ಅವುಗಳಿಗಿಂತಲೂ ಹಿರಿಯ ಗಾತ್ರದ ಮೀನುಗಳು ಸುಲಭವಾಗಿ ಅವುಗಳ ಮುಖಾಂತರ ಕೆಳಗೆ ದಾಟುವುದಕ್ಕೆ ತಡೆಯುಂಟಾಗಿರುತ್ತವೆ. ಹಾಗೆ ನಿರ್ಮಿಸಿದ ವ್ಯವಸ್ಥೆಗೆ "ಯೇವು ಕಟ್ಟುವುದು" ಎನ್ನಲಾಗುತ್ತದೆ. ಹಾಗೆ ನಿರ್ಮಿಸಿದ ಯೇವಿನಲ್ಲಿ ನಾಲ್ಕಾರು ಕಡೆ ಸ್ವಲ್ಪ ಹಿರಿಯ ಗಾತ್ರದ ಕೂಣಿಗಳನ್ನು ಅಳವಡಿಸುತ್ತಾರೆ. ಅವುಗಳೊಳಗೆ ಕೆಲವು ಹಿರಿಯ ಗಾತ್ರದ ಮೀನುಗಳು ದಾಟುತ್ತವೆ. ಪ್ರತಿದಿನ ಬೆಳಗಿನ ಹೊತ್ತು ಈ ಕೂಣಿಗಳನ್ನು ತೆಗೆದು ನೋಡಿದಾಗ ಹಲವಾರು ಮೀನು ಅವುಗಳಲ್ಲಿ ಸೇರಿಕೊಂಡಿರುತ್ತವೆ.

## ಬಲೆ ಹಾಕುವುದು

ಇವೆಲ್ಲಕ್ಕಿಂತ ಬಲೆಗಳನ್ನು ಹಾಕಿ ಮೀನು ಹಿಡಿಯುವುದರಲ್ಲಿ ನಮ್ಮವರು ನಿಸ್ಸೀಮರಾಗಿದ್ದರು. ನಮ್ಮವರೇನು ಈಗಿನವರಂತೆ ನೈಲಾನ್ ಅಥವಾ ಪರ್ಸೀನ್ ಬಲೆಗಳನ್ನು ಹೊಂದಿರಲಿಲ್ಲ. ಸುಮಾರು 5-6 ಅಡಿಗಳ ಉದ್ದ, ಅಷ್ಟೇ ಅಗಲದ ನೂಲಿನ ಬಲೆಗಳವು. ಎರಡು ಪಕ್ಕಗಳಲ್ಲಿ ಬಿದಿರಿನ ಗಳುಗಳನ್ನೇ ಸೇರಿಸಿ ಕಟ್ಟಿದ್ದು, ಮೇಲೆ ಕೆಳಗಿನ ಭಾಗಗಳೂ ಹಾಗೇ ಬಿಟ್ಟಿರುತ್ತಾರೆ. ಬಹುಶಃ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೆಲಸಕ್ಕೆ ಬರುತ್ತಿದ್ದ ಶೇರೇಗಾರರು ಅವುಗಳನ್ನು ತಂದುಕೊಡುತ್ತಿದ್ದರು. ಮಳೆಗಾಲ ಕಳೆದ ನಂತರ ಹೊಳೆಯಲ್ಲಿ ಹರಿಯುವ ನೀರು ಕಡಿಮೆಯಾಗುತ್ತದೆ. ಅಲ್ಲಲ್ಲೇ ಕೆಲವು ತಾಣಗಳಲ್ಲಿ ನೀರು ಕೆರೆಯ ಹಾಗೆ ಸೇರಿಕೊಂಡಿದ್ದು, ಅಲ್ಲಿ ಮೀನುಗಳು ಹೆಚ್ಚಿನ ಸಂಖ್ಯೆಯಲ್ಲಿ ಸೇರಿಕೊಂಡಿರುತ್ತವೆ. ಅಂತಹ ಮಡುಗಳನ್ನು ಮೊದಲೇ ವೀಕ್ಷಿಸಿ ಅಲ್ಲಿ ಬಲೆಹಾಕುವ ಹುನ್ನಾರ ತಯಾರಾಗುತ್ತದೆ. ಮಡುವಿನ ಒಂದು ಕಡೆ ಬಲೆಗೆ ಸೇರಿಸಿದ ಬಿದಿರುಗಳನ್ನು ಇಬ್ಬರು ಹಿಡಿದುಕೊಂಡು

ನೀರಿಗೆ ಇಳಿಯುತ್ತಾರೆ. ಬಲೆಯ ಕೆಳಬದಿ ನೀರಿನೊಳಗೆ ಇಳಿದು ನೆಲವನ್ನು ತಾಗಿಕೊಂಡಿರುತ್ತದೆ. ಇನ್ನು 2-3 ಜನ ಮಡುವಿನ ಇನ್ನೊಂದು ಕಡೆಯಿಂದ ಇಳಿದು ಬಂದು ಉದ್ದುದ್ದಗಳುಗಳಿಂದ ಮಡುವನ್ನು ಕೆದಕುವಂತೆ ಮಾಡುತ್ತಾರೆ. ಗಾಬರಿಯಾದ ಮೀನುಗಳು ಬಲೆ ಕಡೆ ಧಾವಿಸಿದಾಗ ಬಲೆ ಹಿಡಿದವರು ತತ್‌ಕ್ಷಣ ಅದನ್ನು ನೀರಿನಿಂದ ಮೇಲೆತ್ತುತ್ತಾರೆ. ಚಿಕ್ಕ ಗಾತ್ರದ ಸೋಸಲು, ಕರ್ಷೆ ಮೀನುಗಳಿಂದ ಹಿಡಿದು ಹಿರಿಯ ಗಾತ್ರದ ಅವಲು ಮೀನುಗಳೂ ಈ ಬಲೆಗಳಲ್ಲಿ ಸಿಗುವುದು ಅಪರೂಪವೇನಲ್ಲ. ಅವುಗಳನ್ನು ಕೈಗೆತ್ತಿಕೊಂಡು ಬುಟ್ಟಿ ಹಿಡಿದುಕೊಂಡವನ ಬುಟ್ಟಿಗೆ ಹಾಕುತ್ತಾರೆ. ಬೇಸಿಗೆ ರಜೆಯಲ್ಲಿ ಊರಲ್ಲಿದ್ದಾಗ ಬುಟ್ಟಿ ಹಿಡಿಯುವ ಹೆಮ್ಮೆಯ ಕೆಲಸ ನನ್ನದಾಗುತ್ತಿತ್ತು. ಕೆಲಸಾರಿ ಬುಟ್ಟಿಗೆ ಹಾಕಿದ ಮೀನುಗಳು ಮೇಲೆ ಹಾರಿ ತಪ್ಪಿಸಿಕೊಳ್ಳುವುದು ಉಂಟು. ಹಾಗೇನಾದರೂ ಆದರೆ ಬುಟ್ಟಿ ಹಿಡಿದವ ಬೆನ್ನ ಮೇಲೆ ಬಾಸುಂಡೆ ಏಳುವಂತೆ ಲಾತಾ ಬೀಳುತ್ತಿದ್ದವು ! ಬೇಸಗೆಯಲ್ಲಿ ಮನೆಗೆ ದೂರದ ನೆಂಟರು ಬಂದರೆ, ಒಳಗಡೆ ಅಡಿಗೆಯಾಗುತ್ತಿರುತ್ತದೆ ; ಯಜಮಾನರು ಅವರೊಂದಿಗೆ ಕ್ಷೇಮ ಸಮಾಚಾರ ಮಾತನಾಡುತ್ತಿರುತ್ತಾರೆ. ಮಿಕ್ಕುಳಿದವರು ಬಲೆ ಹಿಡಿದುಕೊಂಡು 3-4 ಮಡುಗಳಲ್ಲಿ ಬಲೆ ಹಾಕಿ ಔತಣಕ್ಕೆ ಹೊಳೆ-ಬಾಳೇಕಾಯಿ ತಂದುಬಿಡುತ್ತಾರೆ ! ಮೀನುಗಳು ಸಾಮಾನ್ಯವಾಗಿ ದೊರೆಯುವ ಅವಕಾಶವಿಲ್ಲದ ಕೆಲವು ನೆಂಟರು ಒಂದೆರಡು ದಿನ ನಮ್ಮಲ್ಲಿಗೆ ಬಂದು ಉಪಚಾರ ಮಾಡಿಸಿಕೊಳ್ಳುತ್ತಿದ್ದುದೂ ಉಂಟು.

## ಕಡ ಹಾಕುವುದು

ಮೀನುಗಳು ಸಾಮಾನ್ಯವಾಗಿ ಬಂಡೆಗಳ ತಳ ಅಥವಾ ಹೊಳೆಯ ದಡದ ಬದಿಯಲ್ಲಿ ನೀರಿಗಿಳಿದ ಬೇರುಗಳ ಸಂದಿಗೊಂದಿಗಳಲ್ಲಿ ತಂಗುತ್ತವೆ. ಅಂತಹ ಜಾಗಗಳಲ್ಲಿ ಹಲವು ದಿನಗಳ ವೀಕ್ಷಣೆಯಿಂದ ಖಾತರಿಪಡಿಸಿಕೊಳ್ಳುತ್ತಾರೆ. ಘಾಟು ವಾಸನೆ ಬರುವ ಒಂದು ಮರದ ಸೊಪ್ಪನ್ನು-ಮುಕ್ಕಡಕನ ಸೊಪ್ಪನ್ನು ಜಪ್ಪಿ ರಸ ಹೊರಬರುವಂತೆ ಮಾಡಿ, ಅದರ ಗೊಂಚಲನ್ನು ಬಂಡೆ ಅಥವಾ ಬೇರುಗಳಿರುವ ಪೊಟರೆಗಳ ಸಂದುಗಳಲ್ಲಿ ಅದ್ದಿ ಜಾಳಿಸಿದರೆ ಸೊಪ್ಪಿನ ರಸ ನೀರಿನಲ್ಲಿ ಸೇರಿಹೋಗುತ್ತದೆ. ರಸದ ಘಾಟು ಮೀನುಗಳಿಗೆ ತಾಗಿದಾಕ್ಷಣ ಅವು ಸಂಕಟದಿಂದ ಸಿಡಿಮಿಡಿಗೊಂಡು ಹಾರಿ ಹಾರಿ ಬೀಳಲಾರಂಭಿಸುತ್ತವೆ. ಒಂದು ತರಹೆಯ ಮತ್ತು ಬಂದಂತಾಗಿ ನಿಶ್ಚೇತನಗೊಳ್ಳುತ್ತವೆ. ಅವುಗಳನ್ನು ಸುಲಭವಾಗಿ ಹಿಡಿದುಕೊಳ್ಳಬಹುದು. ಸೊಪ್ಪಿನ ರಸದ ಘಾಟು ಅದನ್ನು ಜಪ್ಪುವವರ ಮುಖಕ್ಕೆ ಹಾರಿದರೂ ಮುಖ 3-4 ದಿನ ಬಾತು ಊದಿಕೊಳ್ಳುತ್ತದೆ. ಹೊಳೆಯಲ್ಲಿ ನೀರು ಕಡಿಮೆಯಾಗುವ ಸಮಯದಲ್ಲಿ ಈ ರೀತಿ "ಕಡಹಾಕಿ" ಮೀನು ಹಿಡಿಯುವ ಹವ್ಯಾಸಕ್ಕಿಳಿಯುತ್ತಾರೆ ನಮ್ಮ ಜನ.

ಅದೇ ತತ್ವದ ಆಧಾರದಿಂದ ಇಡೀ ಹೊಳೆ ಅಥವಾ ನೀರು ನಿಂತಿರುವ ಮಡುವಿಗೆ

ಒಂದು ಬಗೆಯ ಮರದ ಕಾಯಿಗಳನ್ನು ಒಡೆದು ಪುಡಿಮಾಡಿ ಹಾಕುವ ರೂಢಿಯಿದೆ. ಕಾರೇ-ಕಾಯಿಯೆಂದು ಹೇಳಲಾಗುವ ಅವುಗಳನ್ನು ಕಾಡಿನಿಂದ ಮೂಟೆಗಟ್ಟಲೆ ತಂದು ಇಡೀ ಊರಿನವರು, ಕೆಲ ಸಾರಿ ಅಕ್ಕಪಕ್ಕದ ಊರಿನವರೂ ಸೇರಿಕೊಂಡು ಈ ಕಾರ್ಯಕ್ರಮ ದಲ್ಲಿ ತೊಡಗುವುದು ವಾಡಿಕೆ. ದೀಪಾವಳಿ, ಯುಗಾದಿ ಹಬ್ಬಗಳ ಹಿಂದಿನ ಒಂದೆರಡು ದಿನ "ಕಡ ಹಾಕುವುದು" ಎನ್ನುವ ಈ ಪದ್ಧತಿ ಸಾಮೂಹಿಕವಾಗಿ ನಡೆಯುತ್ತದೆ. ಈ ಕಾಯಿಗಳ ಪುಡಿಯನ್ನು ನೀರಿಗೆ ಹಾಕಿ ಒಂದೆರಡು ಗಂಟೆಗಳೊಳಗೇ ಆ ಮಡುವಿನಲ್ಲಿರುವ ಮೀನುಗಳೆಲ್ಲಾ ಸಿಡಿಮಿಡಿಗೊಂಡು ಹಾರಿಬಿದ್ದು ಸಾಯಲಾರಂಭಿಸುತ್ತವೆ. ಸೇರಿದ ಜನರೆಲ್ಲಾ ನೀರಿಗಿಳಿದು ಅವುಗಳನ್ನು ಬುಟ್ಟಿಗಳೊಳಗೆ ತುಂಬಿಕೊಳ್ಳುತ್ತಾರೆ. ಆ ದಿನದ ಸಾಯಂಕಾಲ ದೊಳಗೆ ದಡಗಳ ಮೇಲೆ ಅಲ್ಲಲ್ಲೇ ಮೀನುಗಳ ರಾಶಿ ರಾಶಿಗಳನ್ನು ನೋಡಬಹುದು. ಸಾಯಂಕಾಲದ ಹೊತ್ತಿಗೆ ಆ ಕಾರ್ಯಕ್ರಮದಲ್ಲಿ ಭಾಗಿಯದವರೆಲ್ಲರೂ ಒಟ್ಟಾದ ಮೀನು ಗಳನ್ನು ವಿಂಗಡಿಸಿಕೊಂಡು ತಮ್ಮ ತಮ್ಮ ಊರು, ಮನೆಗಳಿಗೆ ಹಿಂದಿರುಗುತ್ತಾರೆ. ಮುಂದಿನ 3-4 ದಿನಗಳಲ್ಲಿ ಎಲ್ಲರ ಮನೆಯಲ್ಲೂ ಮೀನಿನ ವ್ಯಂಜನದ ಘಮ ಘಮ; ಪಕ್ಕದ ಹೊಳೆಯಲ್ಲಿ ಸ್ಮಶಾನ ಮೌನ, ದುರ್ನಾತ ಹಾಗೂ ಹದ್ದುಗಳ ಹಾರಾಟ, ಸತ್ತು ಕೊಳೆಯುತ್ತಿರುವ ಜಲಚರಗಳ ಕಬಳಿಕೆಗಾಗಿ !

## ಮತ್ಸ್ಯ ಮೇಧ ಯಾಗ

ನಾನೆಂದೂ ಮರೆಯಲಾಗದ ಒಂದು ಅನುಭವ ಇಲ್ಲಿ ಉಲ್ಲೇಖಾರ್ಹ. ಒಂದು ಬೇಸಿಗೆ ರಜೆಯಲ್ಲಿ ನಾನು ಊರಲ್ಲಿದ್ದ ಸಂದರ್ಭ. ಯಡೂರು ಕಡೆಯ ನನ್ನ ಪರಿಚಿತ ಗೌರವಾನ್ವಿತ ಕೆಲವರು ಮನೆಗೆ ಬಂದರು. ಮನೆಯಲ್ಲಿ ಹಿರಿಯವರಾರೂ ಇರಲಿಲ್ಲ. ಬಹುಶಃ ಶಿಕಾರಿಗೆ ಹೋಗಿದ್ದರೆನಿಸುತ್ತದೆ. ಕುಶಲೋಪರಿ, ಕಾಫಿ ಸಮಾರಾಧನೆಗಳಾದ ನಂತರ ನಮ್ಮ ಮನೆಯಲ್ಲಿ ಹಿಂದಿನ ಮಳೆಗಾಲದಲ್ಲಿ ಅಡಿಕೆ ತೋಟಗಳಿಗೆ ಔಷಧಿ ಸಿಂಪಡಿಸಲು ತಂದಿದ್ದ ಮೈಲುತುತ್ತ (Copper Sulphate) ಏನಾದರೂ ಉಳಿದಿರಬಹುದೇ ಎಂದು ವಿಚಾರಿಸಿದರು. ಮನೆಯಲ್ಲಿ ಆ ಇಲಾಖೆಗೆ ಸಂಬಂಧಿಸಿದ ಗಂಡಸರಾರೂ ಇರ ದಿದ್ದುದರಿಂದ ನನ್ನ ತಾಯಿಯನ್ನು ವಿಚಾರಿಸಿದೆ. ಉಪ್ಪರಿಗೆಯ ಮೇಲೆ ಒಂದು ಚೀಲದಲ್ಲಿ ಸ್ವಲ್ಪ ಇರಬಹುದೆಂದರು. ಮೀನುಗಳಿರುವ ಹೊಳೆಯ ಮಡುವಿಗೆ ಅದನ್ನು ಹಾಕಿದರೆ ಮೀನು ಸಾಯುತ್ತವೆಂದು ಅವರಿಗೆ ಯಾರೋ ತಿಳಿಸಿದ್ದಾರೆಂದು ಹೇಳಿ ಸ್ವಲ್ಪ ಕೊಡು ಎಂದು ಕೇಳಿಕೊಂಡರು. ಮನೆಯ ಯಜಮಾನರು ಇಲ್ಲದಿರುವಾಗ ಹಾಗೆ ಕೊಡುವುದು ಸರಿಯಾದ ಕ್ರಮವಲ್ಲವೆಂದು ನನ್ನ ಅಸಹಾಯಕತೆಯನ್ನು ತೋಡಿಕೊಂಡೆ. ಮುಂದಿನ ಮಳೆಗಾಲ ಹಿಡಿಯುವುದರೊಳಗೇ ತಾವು ತರಿಸುವ ಔಷಧಿಯಲ್ಲಿ ವಾಪಸು ಮಾಡುವುದಾಗಿ ದುಂಬಾಲು ಬಿದ್ದರು. ಅಲ್ಲದೆ ಇನ್ನೂ 2-3 ದಿನಗಳಲ್ಲಿ ಮಂಜಣ್ಣಯ್ಯ (ಮನೆಯ ಯಜ ಮಾನರು) ಶಿಕಾರಿಗೆ ಸೇರಿದಾಗ ಸಿಗುತ್ತಾರೆ, ಅವರಿಗೆ ಹೇಳುತ್ತೇನೆಂದು ಒತ್ತಾಯಿಸಿದರು.

ಸರಿ, ಉಪ್ಪರಿಗೆಯಿಂದ ಮೈಲುತುತ್ತದ ಚೀಲವನ್ನು ಅವರೇ ಎರಡು ಜನ ಹೋಗಿ ಕೆಳಗೆ ಇಳಿಸಿಕೊಂಡು ಬಂದರು. ಹನ್ನೊಂದು ದಡಿಯಗಳಷ್ಟಿದ್ದ (ದಡಿಯ = ಒಂದು ಮಣ ತೂಕ ನಾಲ್ಕನೆ ಒಂದು ಭಾಗ) ಮೈಲುತುತ್ತವನ್ನು ತೂಕ ಮಾಡಿ ತೆಗೆದುಕೊಂಡು ಹೋದರು.

ನಮ್ಮೂರಿನ ಹೊಳೆ ಅಂತಿಮವಾಗಿ ವಾರಾಹಿ ನದಿಯನ್ನು ಸೇರುತ್ತದೆ. ನನ್ನ ತಾಯಿಯ ತವರುಮನೆಯಾದ ಮಾನಿಯಲ್ಲಿ ವಾರಾಹಿ ಸಾಕಷ್ಟು ವಿಶಾಲವಾಗಿ ಕಲ್ಲುಬಂಡೆಗಳ ನಡುವೆ ಬೋರ್ಗರೆದು ಧುಮುಕುತ್ತಾ ಹರಿಯುತ್ತದೆ. ಬೇಸಿಗೆಯ ಸಮಯದಲ್ಲಿ ನೀರಿನ ಹರಿವು ಕಡಿಮೆಯಾಗಿ ಅಲ್ಲಲ್ಲೇ ಕೆಲವು ಮಡವುಗಳಲ್ಲಿ ನೀರು ಶೇಖರಣೆಯಾಗಿರುತ್ತವೆ. ಅವುಗಳಲ್ಲಿ ಅತ್ಯಂತ ವಿಶಾಲವಾದ ಒಂದು ಮಡುವು "ಹೆಗಲು ಕಲ್ಲು ಗುಂಡಿ" ನಮ್ಮ ಮಾನಿಯ ಹತ್ತಿರವೇ ಇದೆ. ಅದರ ಆಳವನ್ನು ಅಂದಾಜು ಮಾಡುವುದಕ್ಕೆ ಆಗಿಲ್ಲವೆನ್ನುತ್ತಾರೆ ; ನಾನಾ ಬಗೆಯ ಮೀನು, ಮೊಸಳೆ ಮತ್ತಿತರ ಜಲಚರಗಳ ಮಾತೃ ಸ್ಥಾನವೆಂಬ ಪ್ರತೀತಿ ಅದಕ್ಕಿತ್ತು. ಆದರೆ ಅದರಲ್ಲಿರುವ ಮೀನುಗಳನ್ನು ಹಿಡಿಯುವುದು ಆಜುಬಾಜಿನ ಜನರ ಕೈಲಾಗದ ಕೆಲಸವಾಗಿತ್ತು. ಬೇಸಗೆಯ ಕೆಲವು ದಿನಗಳಲ್ಲಿ ಶಿಳ್ಳೆಕ್ಯಾತರೆಂಬ ಬೆಸ್ತರು ಬಲೆ ಬೀಸಿ ಮೀನುಗಳನ್ನು ಹಿಡಿಯುತ್ತಿದ್ದರು. ಸುತ್ತಲ ಜನರು ಅವರಿಂದ ಕೊಂಡುಕೊಂಡು ಮೀನಿನ ಸವಿಯನ್ನು ಅನುಭವಿಸಬಹುದಾಗಿತ್ತು.

ಈ ಮೊದಲು ಪ್ರಸ್ತಾಪಿಸಿದ ಯಡೂರು ಮತ್ತು ಆಜುಬಾಜಿನ ಜನರಿಗೆ ಹೆಗಲು ಕಲ್ಲು ಗುಂಡಿಗೇ ಕಡಹಾಕಿದರೆ ಯಥೇಚ್ಛವಾಗಿ ಮೀನುಗಳನ್ನು ಹಿಡಿಯಬಹುದೆಂಬ ಯೋಚನೆ ಹೊಳೆಯಿತು. ಯುಗಾದಿ ಹಬ್ಬದ ಸಮಯ ಬೇರೆ. ಮೊದಲು ಪ್ರಸ್ತಾಪಿಸಿದ ಕಾರೇ ಕಾಯಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಶೇಖರಿಸಿ ಹೆಗಲು ಕಲ್ಲು ಗುಂಡಿಗೆ ಹಾಕುವುದು ಅಸಾಧ್ಯವೆಂಬುದು ಅವರಿಗೆ ಹೊಳೆದಿರಬೇಕು. ಅದರಿಂದಲೇ ಮೈಲುತುತ್ತದ ಪ್ರಯೋಗ ಮನಸ್ಸಿಗೆ ಬಂದಿರಬೇಕು. ಆಜುಬಾಜುಗಳಲ್ಲಿ ಆ ವಸ್ತು ಸಾಕಷ್ಟು ಸಿಗದಿದ್ದುದರಿಂದ ಅವರು ನಮ್ಮಿಂದ ತೆಗೆದುಕೊಂಡು ಹೋದರು.

ಇನ್ನು ಮರುದಿನವೇ ಹೆಗಲುಕಲ್ಲು ಗುಂಡಿಗೆ ಮೈಲುತುತ್ತದ ಪ್ರಯೋಗವಾಯಿತು. ಈ ಮಹಾ ಯಾಗಕ್ಕೆ ಆ ಪ್ರದೇಶದ ಹಳ್ಳಿಗಳಿಂದ ನೂರಾರು ಜನ ಅಲ್ಲಿ ಸೇರಿದ್ದರಂತೆ. ಮಧ್ಯಾಹ್ನದ ಹೊತ್ತಿಗೆ ಸಾವಿರಾರು ಮೀನುಗಳು ಸತ್ತು ತೇಲಾಡುತ್ತಿದ್ದವು. ಜನ ಏನೇನೋ ಸಾಧನಗಳನ್ನು ಬಳಸಿಕೊಂಡು ಅವುಗಳನ್ನು ದಡಕ್ಕೆ ತಂದುಹಾಕುವ ಪ್ರಯತ್ನ ಮಾಡುತ್ತಿದ್ದರು. ರಾತ್ರಿಯಾದಂತೆಲ್ಲಾ ರಾಶಿ ರಾಶಿಯಾಗಿ ಮೀನು ಮತ್ತು ಇತರ ಜಲಚರಗಳು ತೇಲಾಡುತ್ತಿದ್ದವಂತೆ. ರಾತ್ರಿಯಾದರೂ ಸೇರಿದ ಜನ ಅಲ್ಲಿಂದ ಕದಲಲಿಲ್ಲ. ಲಾಟೀನು, ಪೆಟ್ರೋಮಾಕ್ಸ್ ಲೈಟುಗಳು ಬೆಳಕು ಚೆಲ್ಲಿದವು. ದಡದ ಮರಳಿನ ರಾಶಿಯಲ್ಲಿ ಬೆಂಕಿ ಹಾಕಿಕೊಂಡು ಚಳಿ ಕಾಯಿಸಿದರು. ಅಲ್ಲೇ ಅಡಿಗೆ ಮಾಡಿ ಊಟ ಮಾಡುವ ಏರ್ಪಾಡೂ

ಆಯಿತು. ಅಷ್ಟೊಂದು ಮೀನು ಸಿಕ್ಕ ಮೇಲೆ ಉಪವಾಸ ಇರುವುದಾದರೂ ಹೇಗೆ! ಮಾರನೆ ದಿನ ಮಧ್ಯಾಹ್ನದವರೆಗೂ ಜನರು, ಸಾಯುತ್ತಿದ್ದ ಮೀನುಗಳನ್ನು ಶೇಖರಿಸಿ ಸಾಗಿಸುತ್ತಿದ್ದರಂತೆ. ಸಾಯಂಕಾಲದ ಹೊತ್ತಿಗೆ ಕಡಹಾಕಲು ಏರ್ಪಡಿಸಿದ ಮುಂದಾಳುಗಳು ಜಲಚರಗಳ ಸಾಮೂಹಿಕ ಕಗ್ಗೊಲೆಯನ್ನು ಸಹಿಸಲಾಗದೆ, ಅಲ್ಲಿಂದ ಕಂಬಿಕಿತ್ತರು. ಮುಂದೆ ಇತರರು ಅಲ್ಲಿಗೆ ಧಾವಿಸಿ ತಮ್ಮ ಪಾಲಿನ ಮೀನುಗಳನ್ನು ಹೆಕ್ಕುತ್ತಿದ್ದರು. ಸ್ವಲ್ಪ ಸಮಯದಲ್ಲೇ ಕೊಳೆಯುತ್ತಿದ್ದ ಮೀನು ಮತ್ತಿತರ ಜಲಚರಗಳ ದುರ್ನಾತ ಗಗನಕ್ಕೇರಿತು. ಹದ್ದುಗಳು ತಂಡೋಪತಂಡವಾಗಿ ಅಲ್ಲಿ ಹಾರಾಡುತ್ತಿದ್ದವು. ಮುಂದಿನ ದಿನಗಳಲ್ಲಿ ಆ ಗುಂಡಿಯಿಂದ ನೀರು ಕೆಳಗಿನ ಪ್ರದೇಶಗಳಿಗೆ ಹರಿದಂತೆಲ್ಲಾ ಆ ಗುಂಡಿಗಳಲ್ಲೂ ಮೀನು ಸಾಯುತ್ತಿದ್ದವಂತೆ. ಆ ಪ್ರದೇಶದಲ್ಲಿ ಮೀನು, ಕಪ್ಪೆ, ಏಡಿ, ಹಾವು, ಆಮೆ ಮುಂತಾದ ಕಿರಿಯ, ಹಿರಿಯ ಜಲಚರಗಳ ಸಂಕುಲವೇ ನಾಶವಾಗಿರಬಹುದೆಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಿದ್ದರು. ಅದೊಂದು 'ಮತ್ಸ್ಯಮೇಧ' ಯಾಗವೇ ಆಯಿತು! ಮೀನು ಹಿಡಿಯುವ ಹವ್ಯಾಸದಲ್ಲಿ ಅದೊಂದು ಭಯಾನಕ ದಾಖಲೆಯಾಯಿತು.

ಒಂದೆರಡು ದಿನಗಳಲ್ಲಿ ನಮಗೂ ಈ ದುರಂತದ ಸುದ್ದಿ ತಿಳಿಯಿತು. ನನ್ನ ಚಿಕ್ಕಪ್ಪಂದಿರೆಲ್ಲಾ ನಾನು ಆ ರೀತಿ ಮೈಲುತುತ್ತವನ್ನು ಕೊಡಬಾರದಿತ್ತೆಂದು ಉದ್ಗಾರವೆತ್ತಿದರು. ಅದರ ಪರಿಣಾಮವನ್ನು ಅರಿಯದಿದ್ದ ನನಗೂ ಬೇಸರವಾಯಿತು. ನಮ್ಮ ಮನೆಯವರು ಸಹಾ ಅನಾದಿಯಿಂದಲೂ ಮೀನು ಹಿಡಿಯುವ ಹವ್ಯಾಸದಲ್ಲಿ ತೊಡಗಿದ್ದವರೇ. ಆದರೆ ನಮ್ಮ ಸ್ವಂತಕ್ಕೆ ಬೇಕಾಗುವಷ್ಟನ್ನು ಒದಗಿಸಿಕೊಳ್ಳುವುದರಲ್ಲಿ ಮಾತ್ರ ತೊಡಗಿಸಿಕೊಳ್ಳುತ್ತಿದ್ದರು. ಎಂದೂ ಇಂತಹ ಮೀನುಗಳ ಸಾಮೂಹಿಕ ವಿನಾಶದತ್ತ ಮನಸ್ಸು ಮಾಡಿದವರಲ್ಲ.

## ಮತ್ಸ್ಯ ಯಂತ್ರ ಗುರಿಗಾರಿಕೆ !

ನನ್ನ ಈ ಮತ್ಸ್ಯ ಪುರಾಣವನ್ನು ಮುಗಿಸುವ ಮುನ್ನ ನಮ್ಮವರು ಮೀನು ಬೇಟೆಗೆ ಕೈಗೊಳ್ಳುತ್ತಿದ್ದ ಚಮತ್ಕಾರಿಕ ಈಡುಗಾರಿಕೆಯನ್ನು ನಿಮಗೆ ಹೇಳಲೇಬೇಕು. ನೆಲದ ಮೇಲೆ ತಿರುಗಾಡುವ ಕಾಡುಪ್ರಾಣಿಗಳನ್ನು ಬಂದೂಕಿನಿಂದ ಸುಟ್ಟುರುಳಿಸುವುದನ್ನು ತಿಳಿಯದವರಾರು? ಆದರೆ ನೀರಿನೊಳಗಿರುವ ಮೀನಿಗೆ ಬಂದೂಕಿನಿಂದ ಗುರಿಯಿಟ್ಟು ಹೊಡೆದುರುಳಿಸುವುದೊಂದು ಅತ್ಯಂತ ಅಚ್ಚರಿಯ ಸಂಗಿತಯೆನಿಸಲಾರದೆ ? ಬೇರೆ ಕಡೆ ಇಂತಹ ಹವ್ಯಾಸ ಇರುವುದೋ ಇಲ್ಲವೋ ನಾನರಿಯೇ. ಮಲೆನಾಡಿನ ಪ್ರದೇಶಗಳಲ್ಲಿ ಇದು ಇರುವುದಂತೂ ನಿಜ. ಅದರಲ್ಲೂ ನಮ್ಮ ಮನೆಯಲ್ಲಿ ಕೆಲವರು ಈ ದಿಸೆಯಲ್ಲಿ ನಿಷ್ಣಾತರಾಗಿದ್ದರೆಂದೇ ಹೇಳಬೇಕು.

ನೀರಿನೊಳಗಡೆ ಇರುವ ಮೀನುಗಳನ್ನು ಬಂದೂಕಿನಿಂದ ಹೊಡೆಯುವ ಕಾರ್ಯಕ್ಕೆ ಇಳಿಯುವ ಮೊದಲು ಅವು ಸಾಮಾನ್ಯವಾಗಿ ತಂಗಬಹುದಾದ ಸ್ಥಳದ ಪರಿಶೀಲನೆ

ನಡೆಸುವುದು ಅತ್ಯಾವಶ್ಯಕ. ಸಾಮಾನ್ಯವಾಗಿ ಅವಲು ಮೀನುಗಳಂತ ಹಿರಿಯ ಗಾತ್ರದವುಗಳನ್ನು ಈ ರೀತಿ ಬೇಟೆಯಾಡಲು ಸಾಧ್ಯ. ಅವು ಮರಿ ಮಾಡಿದ ಸಮಯದಲ್ಲಿ ತಮ್ಮ ಮರಿ ಗಳನ್ನು "ಆಡಿಸುವ" ಸಲುವಾಗಿ ತಂಗುದಾಣದ ಹೊರವಲಯದಲ್ಲಿ ಎಳೆ ಬಿಸಿಲು ಇರುವಾಗ ಕಾಣಿಸಿಕೊಳ್ಳುತ್ತವೆಂದು ಹೇಳಲಾಗುತ್ತದೆ. ತನ್ನ ಮರಿಗಳನ್ನು ಆಡಿಸುತ್ತಾ, ಆಗಾಗ ನೀರಿನಿಂದ ಮೇಲೆ ಸ್ವಲ್ಪ ತನ್ನ ಮೂರ್ತಿಯನ್ನು ಹೊರಗೆ ಚಾಚುತ್ತಾ ನಾನಾ ರೀತಿಯ ಹಾವಭಾವಗಳಲ್ಲಿ ಮರಿಗಳೊಡನೆ ವಿಹರಿಸುವ ನೋಟ ಅತ್ಯಾಕರ್ಷಕವಾಗಿರುತ್ತ ದೆಂದು ಹೇಳುತ್ತಾರೆ. ಈ ರೀತಿಯ ಬೇಟೆಯಲ್ಲಿ ಆಸಕ್ತಿ ಇರುವವರು ಬೆಳಗಿನ ಬಿಸಿಲಿನ ಸಮಯದಲ್ಲಿ ಹೊಳೆಯ ದಂಡೆಯ ಮೇಲೆ ನೀರಿನ ಅಂಚಿನಲ್ಲೇ ಅತ್ಯಂತ ಸಹನೆಯಿಂದ ಸಾವಕಾಶವಾಗಿ ನೀರಿನ ಕಡೆ ವೀಕ್ಷಿಸುತ್ತಾ ಅಡ್ಡಾಡುತ್ತಾರೆ. ಹಾಗೆ ಮೀನು ಆಡುವ ಸೂಚನೆ ಕಂಡಾಗ ಅಲ್ಲೇ ಬಹಳ ಸಮಯ ಉಳಿದುಕೊಂಡು ಅವು ತಿರುಗಾಡುವ ದಿಕ್ಕುಗಳನ್ನೆಲ್ಲಾ ಅಂದಾಜು ಮಾಡಿಕೊಳ್ಳುತ್ತಾರೆ. ಅಲ್ಲದೆ ಮುಂದೆ ಶಿಕಾರಿಗೆ ಬಂದಾಗ ಕುಳಿತುಕೊಂಡು ವೀಕ್ಷಿಸಲು ಸೂಕ್ತವಾದ ಮರ ಅಥವಾ ಅದರ ಕೊಂಬೆಗಳನ್ನೂ ಆರಿಸುವ ನಿರ್ಧಾರವನ್ನೂ ಆಗಲೇ ಮಾಡಿಕೊಳ್ಳುತ್ತಾರೆ. ಬಹುಶಃ ಪ್ರತಿದಿನ ಮೀನು ಅದೇ ಜಾಗ ದಲ್ಲಿ ಆಡುತ್ತದೆಂಬುದನ್ನು ಖಚಿತ ಮಾಡಿಕೊಳ್ಳಲು ಮತ್ತೆ ಮತ್ತೆ ಆ ಜಾಗಕ್ಕೆ ಹೋಗುತ್ತಿರುತ್ತಾರೆ.

ಮುಂದೊಂದು ದಿನ ಪುರುಸೊತ್ತು ಮಾಡಿಕೊಂಡು ಸೂಕ್ತವಾದ ಮರ ಅಥವಾ ಅದರ ಕೊಂಬೆಯ ಮೇಲೆ ಸದ್ದಿಲ್ಲದೆ ಸಹನೆಯಿಂದ ಕಾಯುತ್ತಾ ಕುಳಿತುಕೊಳ್ಳುತ್ತಾರೆ. ಕೈಯಲ್ಲಿರುವ ಬಂದೂಕನ್ನು ಮೀನು ಸಾಮಾನ್ಯವಾಗಿ ಗೋಚರಿಸುವ ಕಡೆ ಗುರಿ ಮಾಡಿ ಹಿಡಿದುಕೊಳ್ಳುತ್ತಾರೆ. ಮೀನು ತನ್ನ ಮರಿಗಳನ್ನು ಆಡಿಸುತ್ತಾ ಆಗಾಗ್ಗೆ ತನ್ನ ಮೂತಿಯನ್ನು ನೀರಿನಿಂದ ಹೊರಗಡೆ ಚಾಚುತ್ತಿರುವ ಚಲನವಲನಗಳನ್ನು ಈಡುಗಾರ ಅತ್ಯಂತ ಏಕಾಗ್ರತೆಯಿಂದ ವೀಕ್ಷಿಸುತ್ತಾ, ಬಂದೂಕಿನ ತುದಿಯನ್ನು ಅದರ ಕಡೆಗೇ ಹೊಂದಿಸಿಕೊಂಡು ಅದರ 'ಕುದುರೆ' (Trigger)ಯನ್ನು ಎಳೆದು ಹಿಡಿದುಕೊಂಡು ಸೂಕ್ತ ಅವಕಾಶಕ್ಕಾಗಿ ಸಹನೆಯಿಂದ ಕಾಯುತ್ತಿರಬೇಕಾಗುತ್ತದೆ. ಹಲವು ಸಲ ಅದು ತಲೆ ಎತ್ತಿದಾಗಲೆಲ್ಲಾ ಬಂದೂಕಿನ ಗುರಿಯು ಅತ್ತ ಚಲಿಸುತ್ತಿರುವಷ್ಟು ಪ್ರತಿಕ್ರಿಯಾತ್ಮಕ ವರ್ತನೆ (Reflex) ಅವನಲ್ಲಿ ಮೈಗೂಡುವವರೆಗೆ ಕಾಯಬೇಕಾಗುತ್ತದೆ. ಹಾಗೆ ಅವನ ವರ್ತನೆ ಪರಿಪೂರ್ಣತೆಯ ಪರಾಕಾಷ್ಠತೆಗೆ ಬಂದಿದೆ ಎಂಬ ಭರವಸೆ ಅವನಿಗುಂಟಾದೊಡನೆ, ಮುಂದಿನ ಸಾರಿ ಮೀನು ತಲೆ ಎತ್ತಿದಾಕ್ಷಣ ಈಡುಗಾರನ ಕೈ ಬೆರಳು ಸ್ವಯಂ ಪ್ರಜ್ಞೆ ಇಲ್ಲದೇ ಬಂದೂಕಿನ ಕುದುರೆಯನ್ನು ಒತ್ತಿಬಿಡುತ್ತದೆ ! ಬಹುಶಃ ಆ ಸಮಯದಲ್ಲಿ ಮೀನಿನ ಮೂತಿಯಲ್ಲದೆ ಬಾಹ್ಯ ಜಗತ್ತಿನ ಬೇರಾವುದರ ಪ್ರಜ್ಞೆಯೂ ಅವನಿಗಿರಲಾರದು. ಮೀನಿಗೆ ಏಟು ತಗುಲಿದರೆ ಅದು ನೀರಿನ ಮೇಲ್ಮೈಯಲ್ಲಿ ಹಾರಿ ಬೀಳಲಾರಂಭಿಸುತ್ತದೆ. ಈಡುಗಾರ ತತ್‌ಕ್ಷಣ ಹೊಳೆಗೆ ಹಾರಿ ಅದನ್ನು ಹಿಡಿದುಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ನೀರಿನಲ್ಲಿ ಅದು

ಮುಳುಗಿ ಹೋಗಿ ಕಣ್ಣಿಗೆ ಕಾಣಿಸದಂತಾಗಬಹುದು. ಈಡುಗಾರ ಒಳ್ಳೆಯ ಈಜುಗಾರನೂ ಆಗಿರುವುದು ಅನಿವಾರ್ಯ.

ನೀರಿನೊಳಗಿರುವ ಮೀನು ಕೇವಲ ಕಣ್ಣು ಮಿಟುಕಿಸುವ ಕಾಲಕ್ಕಿಂತ ಕಡಿಮೆ ಸಮಯದಲ್ಲಿ ಅದಕ್ಕೆ ಗುರಿ ಇಟ್ಟು ಹೊಡೆದು ಬೀಳಿಸುವ ಚಮತ್ಕಾರಿಕೆ ಮಹಾಭಾರತ ಕಥೆಯಲ್ಲಿ ಬ್ರಾಹ್ಮಣವೇಷಿ ಅರ್ಜುನ ದ್ರೌಪದಿಯ ಸ್ವಯಂವರಕ್ಕಾಗಿ ಪಣವಿಟ್ಟಿದ್ದ ಮತ್ಸ್ಯ ಯಂತ್ರವನ್ನು ಭೇಧಿಸಿ ಬಾಣ ಹೊಡೆದಷ್ಟೇ ಕರಾರುವಾಕ್ಕಾಗಿರುತ್ತದೆಂದೇ ಹೇಳಬಹುದಲ್ಲವೆ? ಅಲ್ಲಿ ಮತ್ಸ್ಯ ಯಂತ್ರವನ್ನು ಭೇದಿಸಿದ್ದರಿಂದ ಪಾಂಡವರಿಗೆ ದ್ರುಪದ ರಾಜಕುಮಾರಿ ಲಭಿಸಿದರೆ, ನಮ್ಮವರಿಗೆ ಆ ದಿನ ವ್ಯಂಜನಕ್ಕೆ ಹೊಳೆ-ಬಾಳೇಕಾಯಿ ಲಭಿಸುತ್ತಿತ್ತಷ್ಟೇ ವ್ಯತ್ಯಾಸ ಎನ್ನೋಣವೆ. ಮಲೆನಾಡಿನಲ್ಲಿ ಇಂತಹ ಹಲವು ಅಜ್ಞಾತ ಈಡುಗಾರರು ಇರುತ್ತಿದ್ದರು. ನಮ್ಮ ಮನೆಯಲ್ಲೇ ನನ್ನ ಚಿಕ್ಕಪ್ಪಂದಿರಾದ ಮಂಜಪ್ಪಗೌಡರು ಮತ್ತು ರಾಮಪ್ಪಗೌಡರು ಈ ರೀತಿಯ ಬೇಟೆಯಲ್ಲಿ ಎತ್ತಿದ ಕೈಯೆನಿಸಿಕೊಂಡವರು. ಎಳೆಯ ಪ್ರಾಯದಲ್ಲೇ ಗತಿಸಿದ ನನ್ನ ತಂದೆಯವರೂ ಸಹಾ ಅಷ್ಟೇ ನಿಷ್ಣಾತರಾಗಿದ್ದರೆಂದು ಜನ ಹೇಳುತ್ತಿದ್ದರು. ಅಷ್ಟೇಕೆ ನಮ್ಮ ಒಕ್ಕಲುಗಳಲ್ಲಿ ಕೆಲವು ದೀವರು ಮತ್ತು ಹರಿಜನರಲ್ಲೂ ಸಹಾ ಇಂತಾ ಈಡುಗಾರರು ಇದ್ದರು. ಬಹುಶಃ ಇಂತಹವರ ಅನುಭವದಿಂದಲೇ ಇಂಗ್ಲೀಷ್ ಕವಿ ಟಿ. ಥಾಮಸ್ ಗ್ರೇ (T. Thomas Gray) ಹಳ್ಳಿಯ ರುದ್ರಭೂಮಿಯಲ್ಲಿ ತಿರುಗಾಡುತ್ತಾ ಬರೆದ ಶೋಕಗೀತೆ Elegy Written in A Country Grave Yardನಲ್ಲಿ

Full many a gem of purest ray serene
The dark unfathomed caves of ocean bear
Full many a flower is born to blush unseen
And waste is sweetness in the desert air

*(T. GRAY : Elegy)*

ಮಾನವ ದೃಷ್ಟಿಗೆ ಕಾಣದೆ ಕುಸುಮಗಳೆಷ್ಟೋ ಬೆಳೆಯುವುವು
ಕಾನನದಲಿ ರಂಜಿಸಿ ಪರಿಮಳವು ಬರಿದೇ ಬೀರುವುವು

*(ಹ. ನಾರಾಯಣ ರಾಯರ ಅನುವಾದ)*

ಕೃಷಿಕರಾದ ನಮ್ಮ ಮನೆತನದವರು ಮೀನುಗಾರಿಕೆಯ ಹವ್ಯಾಸವನ್ನು ಇಷ್ಟೊಂದು ಹಚ್ಚಿಕೊಂಡಿರುವುದು ಅಚ್ಚರಿಯುಂಟುಮಾಡದಿರಲಾರದು. ಒಂದೊಂದು ಸಾರಿ ನಾವು ಮೀನುಗಾರ ವೃತ್ತಿಯವರಾಗಿದ್ದೇವೆಯೋ ಎನಿಸಿಬಿಡುತ್ತದೆ. ಆಗಿರಲಾರೆವು ಎಂಬುದರಲ್ಲಿ ಸಂದೇಹವಿಲ್ಲ. ಹೊಳೆಯೊಂದು ನಮ್ಮ ಪಕ್ಕದಲ್ಲಿ ಅನಾದಿಯಿಂದಲೂ ಹರಿಯುತ್ತಿದ್ದು, ಅದರೊಡನೆ ನಮ್ಮವರಿಗೆ ಅವಿನಾ ಸಂಬಂಧ ಹುಟ್ಟಿರಲು ಪ್ರಮುಖ ಕಾರಣ. ಒಂದೊಂದು

ಸಾರಿ ಉಕ್ಕಿ ಹರಿದು ನಮ್ಮನ್ನು ಕೊಚ್ಚಿಕೊಂಡು ಹೋಗಿ ಭಯ ಹುಟ್ಟಿಸಿದರೆ ಮತ್ತೆ ಸದಾ ಮೆಕ್ಕಲು ಮಣ್ಣನ್ನು ನಮ್ಮ ಹೊಲಗಳ ಮೇಲೆ ಹರಡಿ ಫಲವತ್ತುಗೊಳಿಸುತ್ತಿತ್ತು. ಮಳೆಗಾಲದ ನಾಲ್ಕು ತಿಂಗಳು ನಮ್ಮನ್ನು ಬಾಹ್ಯ ಪ್ರಪಚಂದಿಂದ ಬೇರ್ಪಡಿಸಿ, ತುರ್ತು ಸಂದರ್ಭಗಳಲ್ಲಿ ನಮ್ಮವರನ್ನು ಒಳ್ಳೆಯ ಈಜುಗಾರರನ್ನಾಗಿಯೂ ಮಾಡಿತ್ತು. ಹಾಗೆಯೇ ಮೀನಿನ ವ್ಯಂಜನದ ರುಚಿ ನಮ್ಮವರನ್ನು ಮೀನುಗಾರನನ್ನಾಗಿ ಪರಿವರ್ತಿಸಿದ್ದು ಅಚ್ಚರಿಯಲ್ಲ. ಅದರಲ್ಲಿ ಬರು ಬರುತ್ತಾ ಪರಿಣಿತಿಯನ್ನೇ ಪಡೆದರು. ನಾನಾ ರೀತಿಗಳಲ್ಲಿ ಮೀನು ಹಿಡಿದು ಸವಿಯುತ್ತಿದ್ದ ನಮ್ಮವರನ್ನು ಕಂಡು ಅಕ್ಕಪಕ್ಕದ ಹಳ್ಳಿಯವರು ಒಮ್ಮೊಮ್ಮೆ ಅಸೂಯೆಪಟ್ಟುಕೊಳ್ಳುತ್ತಿದ್ದರು; ಮತ್ತೆ ಕೆಲ ಸಾರಿ ಹೊಳೆಗದ್ದೆಯವರು ನೀರಿನಲ್ಲಿ ಮೀನಿನ ಹೆಜ್ಜೆ ನಡೆಸುತ್ತಾರೆ ಎಂಬ ಉದ್ಗಾರವೆತ್ತುವವರಿಗೇನೂ ಕಡಿಮೆ ಇರಲಿಲ್ಲ. ಆದರೆ ಅದೆಲ್ಲಾ ಹಳೇಕಾಲದ ಮಾತಾಯಿತು. ಈಗ ವಾರಾಹಿ ಆಣೆಕಟ್ಟಿನ ನೀರು ನಮ್ಮ ಊರನ್ನೆಲ್ಲಾ ತನ್ನ ಮಡಿಲಲ್ಲಿ ಹಾಕಿಕೊಂಡಿದೆ. ನಮ್ಮವರು ಈಗ ದಿಕ್ಕಾದೇಶಗಡಿಯಾಗಿ ಚೆದುರಿಹೋಗಿದ್ದಾರೆ. ಅವರಿಗೆ ಇನ್ನು ಹೊಳೆಯೆಲ್ಲಿ ? ಮೀನುಗಳಂತೂ ತುಂಬಾ ಅಪರೂಪದ ವಸ್ತು. ಹಳೆಯ ನೆನಪೊಂದೇ ಈಗ ನಮಗೆಲ್ಲ ಉಳಿದಿರುವುದು.

# "ಸತ್ತೇಳು ದೇವಪ್ಪ ಹೆಗ್ಗಡೇರ ಸಿರಿಪಾದವೇ ಗತಿ!"

ಏನಿದು ಹೊಳೆ, ಹೊಳೇ ಯೆಂಥಾ ಅದರ ಬಗೆಗೆ ಬಡಾಯಿ ಕೊಚ್ಚುತ್ತಾ ಕಾಲ ಕಳೆದುಬಿಟ್ಟಿರಲ್ಲ, ಅದಕ್ಕೇನು ಒಂದು ಹೆಸರಿಲ್ಲವೇ ? ಎಲ್ಲಿಂದ, ಎಲ್ಲಿಗೆ ಹೋಗುತ್ತದೆ, ಅದಕ್ಕೇನಾದರೂ ವಿಶೇಷ ಮಹಾತ್ಮೆಗಳಿಲ್ಲವೇ, ಎಂದೆನಿಸಬಹುದು ನಿಮಗೆ. ಹೌದೌದು ಮರತೇಬಿಟ್ಟಿದ್ದೆ. ಹೊಳೆಯ ಮತ್ಸ್ಯ ಪುರಾಣ ಅವೆಲ್ಲಾ ನನ್ನ ಸ್ಮೃತಿ ಪಟಲದಿಂದ ಹಿಂದೆ ಸರಿದುಬಿಟ್ಟಿರಬೇಕು. ಆರಂಭಿಸಲೇ -

ನಮ್ಮ ಊರಿಗೆ ಸುಮಾರು 3-4 ಮೈಲಿಗಳ ದೂರದಲ್ಲಿರುವ ಬೈಸೆ ಎಂಬ ನಮ್ಮ ಸಂಬಂಧಿಕರ ಊರಲ್ಲಿ ಅದು ಉಗಮವಾಗುತ್ತದೆ. ಅಲ್ಲಿಂದ ಸುಮಾರು 10-12 ಮೈಲುಗಳ ದೂರ ಹರಿದು ವಾರಾಹಿ ನದಿಯನ್ನು ಸೇರುತ್ತದೆ. ಹಾಗೇ ನೋಡಿದರೆ ಅದೇನು ಅಷ್ಟು ದೊಡ್ಡ ನದಿಯಲ್ಲ. ಮಳೆಗಾಲದಲ್ಲಿ ದಡ ಮೀರಿ ಹರಿದು, ನೆರೆ ಹಾವಳಿಗೆ ಕಾರಣವಾಗುತ್ತದೆ. ಬೇಸಿಗೆಯಲ್ಲಿ ಬತ್ತಿ ಹೋಗಿ ಅಲ್ಲಲ್ಲೇ ಕೆಲವು ಮಡುವುಗಳಾಗಿ ಮಾರ್ಪಾಡಾಗಿರುತ್ತದೆ. ಮಳೆಗಾಲ ಆರಂಭವಾಗುವ ಹೊತ್ತಿಗೆ ಅದರಲ್ಲಿ ನೀರು ಹರಿಯುವುದು ನಿಂತೇಹೋಗಿಬಿಡುತ್ತದೆ. ವ್ಯವಸಾಯಕ್ಕೆ ಬಹುಪಾಲು ಯಥೇಚ್ಛವಾಗಿ ಬೀಳುವ ಮಳೆಯ ನೀರೇ ಸಾಕಾಗುತ್ತದೆ. ಆದುದರಿಂದ ನಮ್ಮ ಹೊಳೆಯ ನೀರು ಈ ಮೊದಲೇ ವಿವರಿಸಿದಂತೆ ಮೀನು ಹಿಡಿಯಲು, ಈಜಾಡಲು, ಬಟ್ಟೆ ಒಗೆಯಲು ಮಾತ್ರ ಸಹಕಾರಿಯಾಗಿರುತ್ತದೆ.

ಅದು ಹರಿಯುವ ವಿವಿಧ ಊರುಗಳಲ್ಲಿ ಆಯಾ ಊರಿನ ಹೆಸರಿನಿಂದಲೇ ಕರೆಯುವುದಾದರೂ ಅದು ಸಾಮಾನ್ಯವಾಗಿ "ಹೊಳೆಗದ್ದೆ ಹೊಳೆ" ಎಂದೇ ಗುರುತಿಸಲ್ಪಡುತ್ತಿದೆ. ಯಡೂರು ಕಡೆಯಿಂದ ಇನ್ನೊಂದು ಪ್ರಮುಖ ಊರಾದ ಮೇಗರವಳ್ಳಿಗೆ ಹೋಗುವ ದಾರಿ ನಮ್ಮ ಊರ ಮುಖಾಂತರವೇ ಇರುವುದರಿಂದ ಹೊಳೆಯನ್ನು ಇಲ್ಲೇ ದಾಟುವುದು ಅನಿವಾರ್ಯ. ಬೇಸಿಗೆಯಲ್ಲಿ ಸುಲಭವಾಗಿ ದಾಟಬಹುದಾದರೂ ಮಳೆಗಾಲದಲ್ಲಿ 3-4 ತಿಂಗಳು ಎಲ್ಲಿಯೂ ಈ ಹೊಳೆಯನ್ನು ದಾಟಲಾಗುತ್ತಿರಲಿಲ್ಲ. ಕೆಲವು ವರ್ಷಗಳ ಹಿಂದೆ

ದೋಣಿಯೊಂದನ್ನು ಉಪಯೋಗಿಸುತ್ತಿದ್ದರಂತೆ. ಸ್ವಾತಂತ್ರ್ಯ ನಂತರದ ವರ್ಷಗಳಲ್ಲಿ ನಮ್ಮ ಮನೆಯ ಹತ್ತಿರವೇ ಅದಕ್ಕೊಂದು ಸೇತುವೆಯೂ ಮಂತ್ರಿಗಳಾಗಿದ್ದ ಕಡಿದಾಳ್ ಮಂಜಪ್ಪನವರ ಕೃಪೆಯಿಂದ ನಿರ್ಮಾಣವಾಯಿತು. ಕೆಲವು ಪ್ರಭಾವಿ ವ್ಯಕ್ತಿಗಳು ಸೇತುವೆಯನ್ನು ಅವರವರ ಊರುಗಳ ಹತ್ತಿರ ನಿರ್ಮಿಸಬೇಕೆಂದು ಸರ್ಕಾರದ ಮೇಲೆ ಒತ್ತಾಯ ತಂದಿದ್ದರೂ ಬಹು ಜನರ ಅಪೇಕ್ಷೆಯಂತೆ ನಮ್ಮೂರಲ್ಲೇ ನಿರ್ಮಾಣವಾದದ್ದೂ ನಮ್ಮೂರ ವೈಶಿಷ್ಟ್ಯವೆಂದೇ ಹೇಳಬೇಕು.

ಹಳ್ಳಿಗಾಡುಗಳ ನಡುವೆ ಹರಿಯುವ ಹೊಳೆ ಆಗಿದ್ದರೂ ಅದರ "ಮಹಾತ್ಮೆ"ಯೇನೂ ಕಡಿಮೆಯಾಗಿರಲಿಲ್ಲ. ಅದು ಹರಿಯುವ ಊರುಗಳ ದಡಗಳಲ್ಲಿ ಹಳ್ಳಿಯವರ ಆರಾಧ್ಯ ದೈವ, ಭೂತಗಳ - 'ದೇವರ ಬನ' - ಗಳಿದ್ದವು. ಈಗಿನ 'ಪವಿತ್ರ ವನ'ಗಳಂತೆ ಅವು ಸುರಕ್ಷಿತ ಕಾಡುಗಳು. ಆ ಪ್ರದೇಶಗಳಲ್ಲಿ ಜನ ಮರದ ಒಂದು ಕೊಂಬೆಯನ್ನೂ ಕಡಿಯಲು ಹೆದರುತ್ತಿದ್ದರು. ನಮ್ಮೂರಲ್ಲಿ ಈ ಸೇತುವೆ ನಿರ್ಮಾಣವಾಗಿರುವ ಎಡೆಯಲ್ಲೇ ನಮ್ಮ "ಭ್ರರ್ಮರ" (?ಬ್ರಹ್ಮ) ದೇವರ ಬನ ಇತ್ತು. ಅದೊಂದು ಅತ್ಯಂತ ಪವಿತ್ರ ಸ್ಥಳವಾಗಿತ್ತು. ನಮ್ಮವರಿಗೆ ಅಲ್ಲಿರುವ ಹತ್ತಾರು ಮರಗಳ ಬುಡಗಳಲ್ಲಿ ತ್ರಿಕೋಣಾಕಾರದ ಚೂಪಾದ ಕಲ್ಲುಗಳನ್ನು ನಿಲ್ಲಿಸಿರುತ್ತಿದ್ದರು. ಅವುಗಳೇ ನಾನಾ ಹೆಸರಿನಿಂದ ಕರೆಯಲ್ಪಡುವ ದೈವ, ಭೂತಗಳು ! ಪ್ರತೀವರ್ಷ ಅವುಗಳಿಗೆ ವಿಧಿವತ್ತಾಗಿ ಪೂಜೆ ಪುನಸ್ಕಾರಗಳು ಆಗಲೇಬೇಕು. ನಿಗದಿತ ಸಮಯ ಸಾಮಾನ್ಯವಾಗಿ ಮಳೆಗಾಲ ಆರಂಭವಾಗುವ ಮೊದಲು ಅಂತಹ "ಹರಕೆ ಪೂಜೆ" ನಡೆಸಲಾಗದಿದ್ದರೆ, ರೈತರಿಗೆ ನೆಮ್ಮದಿಯಾಗುವುದಿಲ್ಲ. ಬೆಳಗಿನ ಹೊತ್ತು ಬ್ರಾಂಬರೊಬ್ಬರು (ಬ್ರಾಹ್ಮಣರು) ಬನವನ್ನು ಅವರ ದೇವಸ್ಥಾನದಿಂದ ತಂದ ತೀರ್ಥದ ನೀರನ್ನು ಸಿಂಪಡಿಸಿ 'ಶುದ್ಧಿ' ಮಾಡುತ್ತಾರೆ. ನಂತರ ಮಧ್ಯಾಹ್ನದ ನಂತರ ಕುರಿ, ಕೋಳಿಗಳ ಬಲಿಯಾಗುತ್ತದೆ! ಆ ಬನಗಳು ಅದೆಷ್ಟು ಪವಿತ್ರವಾಗಿರುತ್ತವೆಂದರೆ ರಜಸ್ವಲೆಯಾದ ಸ್ತ್ರೀಯರು ಮತ್ತು ಅಸ್ಪೃಶ್ಯರು ಯಾವತ್ತೂ ಆ ಬನಗಳೊಳಗಡೆ ಓಡಾಡುವುದು ನಿಷಿದ್ಧ. ಅಲ್ಲಿ ಒಂದು ಮರದ ಕೊಂಬೆ ಕಡಿದವರು ರಕ್ತಕಾರಿ ಸಾಯುತ್ತಾರೆಂಬ ಪ್ರತೀತಿ ಇತ್ತು. ಆದರೆ ಕೆಲವು ವರ್ಷಗಳ ಹಿಂದೆ ಆ ಬನದ ಹತ್ತಿರವೇ ನಮ್ಮೂರ ಸೇತುವೆಯೂ ನಿರ್ಮಾಣವಾಯಿತು. ಅಲ್ಲಿದ್ದ ಹೆಮ್ಮರವನ್ನೇ ಕಡಿದುರುಳಿಸಿದರು ; ಸ್ಪರ್ಶರು, ಅಸ್ಪರ್ಶರು, ಹೆಂಗಸರೆಲ್ಲಾ ಅಲ್ಲೇ ಕಾರ್ಯನಿರತರಾಗಿರುತ್ತಿದ್ದರು. ಆದರೆ ಯಾರೂ ರಕ್ತಕಾರಿ ಸಾಯುವುದಿರಲಿ, ಅಪಘಾತಗಳಿಗೀಡಾಗಲೂ ಇಲ್ಲ ! ಸಾವಿರಾರು ಜನರಿಗೆ ಉಪಕಾರವಾಗುವಂತಹ ಕೆಲಸ ದೇವರಿಗೂ ಗೊತ್ತಿರುವುದಲ್ಲವೇ. ಭ್ರರ್ಮನೇ ಎಲ್ಲರನ್ನೂ ಕ್ಷಮಿಸಿ ಕಾಪಾಡಿರಬೇಕು!

ಭ್ರರ್ಮನ ಬನವಿರುವೆಡೆಯಲ್ಲಿ ಹೊಳೆ ಸ್ವಲ್ಪ ಅಗಲವಾಗಿ ಹರಿಯುತ್ತದೆ. ಅದರ ನಡುವಿನಲ್ಲಿ ನೀರಿನಿಂದ ಮೇಲೆದ್ದ ಅಗಲವಾದ ಬಂಡೆಯೊಂದಿದೆ. ಅದರ ಒಂದು ಕಡೆ

ಎದೆಯ ಸ್ತನಗಳಂತೆ ಉಬ್ಬಿಕೊಂಡಿತ್ತು. ಹಾಗಾಗಿ ಅದೊಂದು ಪವಿತ್ರ ಬಂಡೆಯಾಗಿತ್ತು. ಅದೊಂದು 'ದೇವಿ'ಯನ್ನು ಪ್ರತಿನಿಧಿಸುತ್ತದೆಂಬ ನಂಬಿಕೆಯೂ ಇತ್ತು. ಅದನ್ನು ಸಹಾ ರಜಸ್ವಲೆಯಾದವರು ಮುಟ್ಟುವಂತಿರಲಿಲ್ಲ. ಅಸ್ಪರ್ಶರೂ ಸಹಾ ಹತ್ತಿರ ಸುಳಿಯುವಂತಿರಲಿಲ್ಲ. ಆದರೆ ನಮ್ಮ ಕಪಿಸೈನ್ಯದ ಹುಡುಗರಿಗೆ ಯಾವ ಅಡಚಣೆಗಳೂ ಇರಲಿಲ್ಲ. ಬಟ್ಟೆಗಳನ್ನು ಒಗೆಯುವುದಕ್ಕೆ ಅದೇ ನಮಗೆ ಪ್ರಶಸ್ತ್ಯವಾದ ಬಂಡೆ. ಅದರ ಉಬ್ಬಿದ ಮೊಲೆಗಳಂತ ತುದಿಗಳಿಂದ ನೀರಿಗೆ "ಡೈವ್" ಮಾಡಲು ಹೇಳಿ ಮಾಡಿಸಿದಂತಿದ್ದವು. ನಾನು ಅದರಿಂದಲೇ ಹಾರುತ್ತಾ ಈಜು ಕಲಿತದ್ದು. ಕಾಲಕ್ರಮೇಣ ಅದರ ಮಹಾತ್ಮೆಯೂ ಕಡಿಮೆಯಾಯಿತು. ಸೇತುವೆ ನಿರ್ಮಾಣದ ಕಾಲದಲ್ಲಿ ಕೆಲಸಕ್ಕೆ ಬಂದ ಕಾರ್ಮಿಕ ವರ್ಗದವರೆಲ್ಲಾ ಅದನ್ನು ಹತ್ತಿ ಹಾರಿದರು ; ಯಾರಿಗೂ ಏನೂ ಆದಂತಿಲ್ಲ. ನಮ್ಮ ಮನೆಯ ಹಿರಿಯರು "ಕಾಲ ಬದಲಾಯಿತು, ಕಾಲ ಕೆಟ್ಟು ಹೋಯಿತು" ಎಂದೆಲ್ಲಾ ಗೊಣಗಿಕೊಂಡರು. ಅನಾದಿಯಿಂದಲೂ ನಂಬಿಕೊಂಡು ಬಂದಿದ್ದ ಮೂಢನಂಬಿಕೆಗಳು ಒಂದಾದ ಮೇಲೊಂದರಂತೆ ಕಳಚುವ ರೀತಿಗಳು ಹೀಗಲ್ಲವೆ ಎಂದೆನಿಸಿ ಹರ್ಷವಾಯಿತು ನನ್ನಂತಹವರಿಗೆ.

ಇದಿಷ್ಟೇನಾ, ನಿಮ್ಮ ಹೊಳೆಯ ಮಹಾತ್ಮೆಯೆಂದು ಮೂತಿವರಿಯುವಂತಾಗಿರಬಹುದು ನಿಮಗೆ. ಇಲ್ಲ ಇನ್ನೂ ಇದೆ. ಅವಸರಪಡಬೇಡಿ :

## ಸತ್ತ್ಯೇಳರ ಕಟ್ಟೆ

ಹೊಳೆ ನಮ್ಮೂರನ್ನು ಪ್ರವೇಶಿಸುವ ಮೊದಲು ಬೆಲಗಣೆ ಎಂಬ ಒಂದೇ ಮನೆ ಇರುವ ಊರೊಂದಿದೆ. ಅಲ್ಲಿರುವ "ಸತ್ಯೇಳರ ಕಟ್ಟೆ"ಯ ವಿಷಯ ಹೇಳದೆ ನಮ್ಮ ಹೊಳೆಯ ಪುರಾಣ ಮುಗಿಸುವಂತಿಲ್ಲ. ಅದು "ಸತ್ತು ಏಳುವವರ ಕಟ್ಟೆ"ಯೆಂದು ನೀವೀಗಾಗಲೇ ಅರ್ಥಮಾಡಿಕೊಂಡಿರಬಹುದಲ್ಲವೇ ? ಹಾಗಲ್ಲ ಅದು. ಸತ್ಯ ಹೇಳುವವರ ಕಟ್ಟೆಯೆಂಬುದು ಅದರ ಮೂಲ ಅರ್ಥ. ನಮ್ಮ ಪ್ರದೇಶದಲ್ಲಿ ಕೆಲ ಕಾಲದ ಹಿಂದೆ ಇದ್ದ ಸತ್ಯ ಹೇಳುವ ದೇವಪ್ಪ ಹೆಗ್ಗಡೆ ಎಂಬುವವರ ಐತಿಹ್ಯವನ್ನು ಸಾರುವ ಸಾಕ್ಷಿಯಾಗಿತ್ತು, ಆ ಕಟ್ಟೆ.

ನಮ್ಮ ಊರಿಗೆ ಸುಮಾರು ಮೂರು ಮೈಲಿ ದೂರದಲ್ಲಿರುವ ಯಡೂರು ಎಂಬ ಊರಿನ ಪ್ರಸ್ತಾಪ ಈಗಾಗಲೇ ಬಂದಿದೆ. ಅಲ್ಲಿ ಸುಮಾರು 150-200 ವರ್ಷಗಳಷ್ಟು ಹಿಂದೆ ದೇವಪ್ಪ ಹೆಗ್ಗಡೆಯೆಂಬ ಪುಣ್ಯಾತ್ಮರೊಬ್ಬರಿದ್ದರಂತೆ. ಅವರು ಜೈನರಾಗಿದ್ದರೋ ಅಥವಾ ಒಕ್ಕಲಿಗರಾಗಿದ್ದು ನಂತರ ಜೈನಮತಕ್ಕೆ ಸೇರಿದರೋ ಎಂಬುದರ ಬಗೆಗೆ ಜಿಜ್ಞಾಸೆಗಳಿವೆ. ನೀತಿ, ಧರ್ಮಗಳ ಆಚರಣೆಯಲ್ಲಿ ಆ ಕಡೆಗೆಲ್ಲಾ ಪ್ರಸಿದ್ಧಿ ಪಡೆದುಕೊಂಡಿದ್ದರು. ಯಾವತ್ತೂ ಸತ್ಯವನ್ನೇ ಹೇಳುವ ಹರಿಶ್ಚಂದ್ರನಂತವರಂತೆ. ಹಾಗಾಗಿ ಅವರ ಸುತ್ತ

ಹಲವು ಪವಾಡಗಳು ಹುಟ್ಟಿಕೊಂಡಿದ್ದವು. ಅವರು ಪ್ರತಿದಿನ ಬೆಳಿಗ್ಗೆ ಬೆಲಗಣೆಯ ಹತ್ತಿರದ ನಮ್ಮ ಹೊಳೆಗೇ ಬಂದು ಸ್ನಾನ ಮಾಡಿಕೊಂಡು ಹೋಗುತ್ತಿದ್ದರಂತೆ. ಹಾಗೆ ಹೊರಡುವ ಮೊದಲು ಹೊಲದಲ್ಲಿ ಒಂದಿಷ್ಟು ಜಾಗವನ್ನು ಹಾರೆಯಿಂದ ಕೊಚ್ಚಿ ಮಡಿ ಮಾಡಿ ಹರವೇ ಸೊಪ್ಪು ಮುಂತಾದ ಬೆಳೆಗಳ ಬೀಜವನ್ನು ಬಿತ್ತಿ ಸ್ನಾನಕ್ಕೆ ಬರುತ್ತಿದ್ದರಂತೆ. ಅವರು ಸ್ನಾನ ಮಾಡಿ ಹಿಂದಿರುಗುವುದರೊಳಗೇ ಅಲ್ಲಿ ಸೊಪ್ಪು ಬೆಳೆದು, ಅವರ ಹೆಂಡತಿ ಪಲ್ಯ ಮತ್ತಿತರ ಭೋಜ್ಯಗಳನ್ನು ತಯಾರಿಸಿಟ್ಟುಕೊಳ್ಳುತ್ತಿದ್ದರಂತೆ. ಒಂದು ಸಾರಿ ಅವರು ಮಧ್ಯಾಹ್ನ ಕಳೆದು ಬಹಳ ಸಮಯವಾದರೂ ವಾಪಸು ಬರಲೇ ಇಲ್ಲವಂತೆ. ಮೊಸರು ಕಡೆಯುತ್ತಿದ್ದ ಅವರ ಹೆಂಡತಿ "ಅವರೇನು ಅಲ್ಲೇ ಮಾಯವಾಗಿಬಿಟ್ಟರೇ" ಎಂದು ಉದ್ಗಾರ ಮಾಡಿದರಂತೆ. ಹೆಗ್ಗಡೆಯವರು ನಮ್ಮ ಹೊಳೆಯಲ್ಲೇ ಮಾಯವಾದರಂತೆ ; ಅವರ ಹೆಂಡತಿ ಕಡೆಗೋಲು ಹಿಡಿದವರು ಅಲ್ಲೇ ಮಾಯವಾಗಿಬಿಟ್ಟರಂತೆ ! ಹೊಳೆ ದಡದಲ್ಲಿದ್ದ ಹೆಮ್ಮರವೊಂದರ ಬುಡದಲ್ಲಿ ಹೆಗ್ಡೆಯವರು ಸ್ನಾನ ಮಾಡಿದ ನಂತರ ಹಣೆಗೆ ನಾಮ ಧರಿಸುತ್ತಿದ್ದ ಪರಿಕರಗಳ ಪೆಟ್ಟಿಗೆ ಈಗಲೂ ಕಾಣಿಸುತ್ತದೆಂದು ನಮ್ಮ ಹಿರಯರು ಆ ಕಡೆ ಕೈ ಮಾಡಿ ತೋರಿಸುತ್ತಿದ್ದರು. ನಾನು ಆ ಕಡೆ ಹೋದಾಗಲೆಲ್ಲಾ ಅಲ್ಲಿದ್ದವರು "ಅಗೋ ನೋಡು, ನಾಮದ ಪೆಟ್ಟಿಗೆಯ ಒಂದು ಮೂಲೆ ಮಾತ್ರ ಕಾಣಿಸುತ್ತದೆ, ಈಗ 10-20 ವರ್ಷಗಳ ಹಿಂದೆ ಇಡೀ ನಾಮದ ಪೆಟ್ಟಿಗೆಯೇ ಕಾಣಿಸುತ್ತಿತ್ತು" ಎಂದು ತೋರಿಸುತ್ತಿದ್ದರು. ಆದರೆ ಅದು ನನ್ನ ಕಣ್ಣಿಗೆ ಗೋಚರಿಸುತ್ತಿರಲಿಲ್ಲವೆಂಬ ಸತ್ಯವನ್ನು ನಾನು ಹೇಳಲೇಬೇಕು.

ಸತ್ತೇಳು ದೇವಪ್ಪ ಹೆಗ್ಗಡೆಯವರ ಮಹಾತ್ಮೆ ಶೃಂಗೇರಿಯವರೆಗೂ ತನ್ನ ಪ್ರಭಾವ ಬೀರಿತೆನ್ನಲಾಗಿದೆ. ಒಂದು ಸಾರಿ ಅಲ್ಲಿ ಹೊಸದಾಗಿ ನಿರ್ಮಿಸಿದ್ದ ಗರುಡಗಂಭವನ್ನು ಎಷ್ಟೇ ಪ್ರಯತ್ನಮಾಡಿದರೂ ನೇರವಾಗಿ ನಿಲ್ಲಿಸಲು ಸಾಧ್ಯವಾಗುತ್ತಿರಲಿಲ್ಲವಂತೆ. ಒಂದು ಸಾರಿ ಯಡೂರು ಕಡೆಯಿಂದ ಅಲ್ಲಿಗೆ ಹೋದ ಹೊಲೆಯವರೊಬ್ಬನು ಅವಕಾಶ ಕೊಟ್ಟರೆ ತಾನು ಅದನ್ನು ನಿಲ್ಲಿಸುವುದಾಗಿ ಹೇಳಿದನಂತೆ. ಸ್ವಾಮಿಗಳೂ ಒಪ್ಪಿ ಅವನೂ ಪ್ರಯತ್ನಿಸಬಹುದೆಂದು ಅಪ್ಪಣೆ ಕೊಡಿಸಿದರಂತೆ. ಅವನೇ ಗರುಡಗಂಭದ ಒಂದು ತುದಿಯನ್ನು ಹಿಡಿದುಕೊಂಡು "ಸತ್ಯೇಳು ದೇವಪ್ಪ ಹೆಗ್ಗಡೆಯವ ಸಿರಿಪಾದವೇ ಗತಿ" ಎಂದು ಹಲವು ಬಾರಿ ಉಚ್ಚರಿಸುತ್ತಾ ಕಂಬವನ್ನು ಎತ್ತಲು ಶುರು ಮಾಡಿದನಂತೆ. ಕಂಬ ಸಲೀಸಾಗಿ ಎದ್ದುನಿಂತುಬಿಟ್ಟಿತ್ತಂತೆ ! ಅಲ್ಲಿದ್ದವರಿಗೆಲ್ಲಾ ಅತ್ಯಾಶ್ಚರ್ಯವಾಯಿತು. ಸ್ವತಃ ಸ್ವಾಮೀಜಿಗಳೇ ಯಡೂರಿಗೆ ಪ್ರಯಾಣ ಮಾಡಿ ಹೆಗ್ಗಡೆಯವರನ್ನು ಭೇಟಿ ಮಾಡಿ, ಅವರ ಮಹಿಮೆಯನ್ನು ಕೊಂಡಾಡಿದರಂತೆ. ಅವರಿಗೆ ಹೊನ್ನು ಹಚ್ಚಡ ಹೊದಿಸಿ, ಪಲ್ಲಕ್ಕಿಯನ್ನು ಕೊಟ್ಟು ಗೌರವಿಸಿದರಂತೆ. ದೇವಪ್ಪ ಹೆಗ್ಗಡೆಯವರ ಇಂದಿನ ಸಂತತಿಯವರ ಮನೆಯಲ್ಲಿ ಆ ಪಲ್ಲಕ್ಕಿ ಇತ್ತೀಚಿನ ದಿನಗಳವರೆಗೂ ಇದ್ದದ್ದನ್ನು ನೋಡಿದ್ದೇನೆ.

ಸತ್ಯೇಳು ದೇವಪ್ಪ ಹೆಗ್ಗಡೆಯವರೇ ಮಾಯವಾದ ನಂತರ ಸತ್ಯೇಳರ ಕಟ್ಟೆ ಮತ್ತು ಅಲ್ಲಿದ್ದ ನೀರಿನ ಮಡುವಿಗೆ ಹೆಚ್ಚಿನ ಪ್ರಾಶಸ್ತ್ಯ ಬಂದುದರಲ್ಲಿ ಆಶ್ಚರ್ಯವೇನಿಲ್ಲ. ಪ್ರತಿ ವರ್ಷ ಎಳ್ಳಾಮಾವಸ್ಯೆಯ ದಿನ ಸುತ್ತಲ ಹಳ್ಳಿಯ ನೂರಾರು ಜನ ತೀರ್ಥಹಳ್ಳಿಯ ಪರಶು ರಾಮ ಕ್ಷೇತ್ರದಲ್ಲಿ ಎಳ್ಳಾಮಾಸ್ಯೆ ಸ್ನಾನ ಮಾಡುವಂತೆ ಇಲ್ಲಿಯೂ ಸ್ನಾನ ಮಾಡುತ್ತಿದ್ದರು. ನಾನು ಹಲವು ಸಲ ಸ್ನಾನ ಮಾಡಿದ್ದೆ.

ಈ ಎಲ್ಲಾ ಐತಿಹ್ಯಗಳಿಂದ ಸತ್ಯೇಳು ದೇವಪ್ಪ ಹೆಗ್ಗಡೆಯೆಂಬವವರಿದ್ದರೋ ಇಲ್ಲವೋ ಎಂಬುದರ ಬಗೆಗೆ ಅನುಮಾನ, ಜಿಜ್ಞಾಸೆಗಳಿರಬಹುದು. ಆದರೆ ನಮ್ಮ ಕಡೆ ಅಂದರೆ ನಗರ, ಯಡೂರು, ಮೇಗರವಳ್ಳಿ ಸೀಮೆಗಳ ಜನರು ಪ್ರತಿವರ್ಷ ಮುಂಗಾರಿಗೆ ಮೊದಲು ತಮ್ಮ ಗದ್ದೆಗಳಿಗೆ ಬೀಜ ಹಾಕುವಾಗ "ಸತ್ಯೇಳು ದ್ಯಾವಪ್ಪ ಹೆಗ್ಗಡೇರ ಸಿರಿ ಪಾದವೇ ಗತಿ" ಎಂದು ಮೂರು ಬಾರಿ ಉಚ್ಚರಿಸಿ ಬೀಜ ಬಿತ್ತುತ್ತಾರೆ. ಅವರಿದ್ದರೆಂಬುದಕ್ಕೆ ಇದೊಂದು ಜೀವಂತ ನಿದರ್ಶನವಲ್ಲವೇ. ಮುಂದೆ ವಾರಾಹಿ ಅಣೆಕಟ್ಟೆಯ ನೀರಿನಲ್ಲಿ ಈ ಪ್ರದೇಶಗಳೆಲ್ಲಾ ಮುಳುಗಡೆಯಾದವು. ಆಗ ಇದ್ದ ಜನರಿಗೆ ದೇವಪ್ಪ ಹೆಗ್ಗಡೆಯವರ ಮಹಾತ್ಮೆಯನ್ನು ಸಾರಲು ಸತ್ಯೇಳರ ಕಟ್ಟೆಯಾದರೂ ಇತ್ತು ; ಪ್ರತಿವರ್ಷ ಅವರ ಹೆಸರಿನಲ್ಲಿ ಪುಣ್ಯ ಸ್ನಾನವನ್ನೂ ಮಾಡುತ್ತಿದ್ದರು. ಈಗ ಹತ್ತಾರು ಕಡೆ ಹಂಚಿಹೋದ ಈ ಜನರ ಮುಂದಿನ ಸಂತತಿಯವರಿಗೆ ಸತ್ಯೇಳು ದೇವಪ್ಪ ಹೆಗ್ಗಡೆಯವರು ಮರೆತೇ ಹೋಗಬಹುದು. ನನಗೂ ಈಗ ಅದೂ ಒಂದು ನಮ್ಮ ಊರಿನ ನೆನಪಾಗಿ ಉಳಿದುಕೊಂಡಿದೆ, ಅಷ್ಟೇ.

ಈಗ ನಿಮಗೆ ಗೊತ್ತಾಗಿರಬಹುದು. ನಮಗೂ ನಮ್ಮೂರ ಹೊಳೆಗೂ ಇರುವ ಬಾಂಧವ್ಯ. ಅದಿಲ್ಲದೆ ನಾವಿಲ್ಲವೆಂದರೆ ಅತಿಶಯೋಕ್ತಿಯಲ್ಲ.

ಕ್ಷಮಿಸಿ, ನಮ್ಮೂರಿನ ನೆನಪುಗಳನ್ನು ಹೇಳುತ್ತೇನೆಂದು ಹೊಳೆ ದಾಟಲು ಇಳಿದವನು, ಆಚೆ ದಡ ಮುಟ್ಟಲೇ ಇಲ್ಲ. ಅದು ನಮ್ಮ ಹೊಳೆಯ ಪ್ರಭಾವ ! ಬನ್ನಿ ದಡ ಹತ್ತಿ ನಮ್ಮ ಮನೆ ಕಡೆ ಹೆಜ್ಜೆ ಹಾಕೋಣ. ಅಗೋ ನೋಡಿ ಅಲ್ಲೇ ಇದೆ, ಕಾಣಿಸುತ್ತಿದೆ!

# ನಮ್ಮ ಮನೆ

ಹೊಳೆ ದಡ ಹತ್ತಿ ಸುಮಾರು ಇಪ್ಪತ್ತೈದು ಮಾರುಗಳ ದೂರ ಗದ್ದೆಗಳ ಅಂಚಿನಲ್ಲಿ ನಡೆದರೆ ನಮ್ಮ ಮನೆ ಸಿಗುತ್ತದೆ. ಅದೇನು "ಮಾರುಗಳ ದೂರ" ಎಂದರೆ ನಿಮಗೆ ಅರ್ಥ ವಾಯಿತೋ ಇಲ್ಲವೋ ತಿಳಿಯಲಿಲ್ಲ. ನನಗೂ ಸರಿಯಾಗಿ ಗೊತ್ತಿಲ್ಲವೆಂದರೆ ಅವಮಾನ ವೇನೂ ಇಲ್ಲ. ಊರವರು ಸಂದರ್ಭಕ್ಕನುಸಾರ ಅದರ ಉದ್ದವನ್ನು ಎಳೆದುಬಿಡುತ್ತಾರೆ; ಇಲ್ಲವೆ ಕುಗ್ಗಿಸಿಬಿಡುತ್ತಾರೆ. ಅದೇನೆ ಇರಲಿ ಹೊಳೆಯಿಂದ ನಮ್ಮ ಮನೆ ಕೇವಲ ಕಾಲು ಫರ್ಲಾಂಗು ದೂರವಿರಬಹುದು ಅಷ್ಟೆ. ಮನೆಯ ಹತ್ತಿರ ಹತ್ತಿರ ಬರುತ್ತಿದ್ದಂತೆಯೇ ಇದೇನು ಗಂಜಳ, ಗಲೀಜು, ವಾಸನೆ ಎಂದು ಮೂಗು ಮುಚ್ಚಿಕೊಳ್ಳುತ್ತಿಲ್ಲ. ಮಲೆನಾಡ ರೈತರಿಗೂ ಜಾನುವಾರುಗಳಿಗೂ ಇರುವ ನಿಕಟಸಂಬಂಧ ನಿಮಗೆ ತಿಳಿದಿರಲಾರದು. ಅವರ ದೈನಂದಿನ ಜೀವನವೇ ಅಲ್ಲದೆ ರೈತಾಪಿ ಕೆಲಸಗಳಾದ ಉಳುಮೆ ಮತ್ತು ಗಾಡಿಗಳ ಎಳೆತಕ್ಕೆ ಅವು ಬೇಕೇ ಬೇಕು. ಎಲ್ಲಕ್ಕಿಂತ ಮಿಗಿಲಾಗಿ ವ್ಯವಸಾಯಕ್ಕೆ ಬೇಕಾದ ಗೊಬ್ಬರದ ಮೂಲ ವಸ್ತುವೇ ಜಾನುವಾರುಗಳ ಸೆಗಣಿ, ಅಲ್ಲವೆ? ಆದುದರಿಂದ ಜಾನುವಾರುಗಳ ಕೊಟ್ಟಿಗೆ, ಮನೆಗಳ ಹತ್ತಿರವೇ ಇರುವುದು ಅನಿವಾರ್ಯವಾಗಿಬಿಡುತ್ತದೆ. ಸ್ವಲ್ಪ ಮುಂದೆ ನಡೆದರೆ ಮನೆಯ ಅಂಗಳ. ಮೆಟ್ಟಿಲು ಹತ್ತುವ ಅನತಿ ದೂರದಲ್ಲೇ ತುಳಸೀ ಕಟ್ಟೆ. ಸಾಕ್ಷಾತ್ ತಿರುಪತಿ ವೆಂಕಟರಮಣನ ಪ್ರತಿನಿಧಿ. ಅದರ ಮುಂದೆ ಚಪ್ಪಲಿ, ಬೂಟ್ಸು ಹಾಕಿ ತಿರು ಗಾಡುವಂತಿಲ್ಲ. ನಿಮ್ಮ ಚಪ್ಪಲಿಗಳನ್ನೂ ಈಗ ಸ್ವಲ್ಪ ದೂರದಲ್ಲೆ ಕಳಚಿಬಿಡಬೇಕಾಗು ತ್ತದೆ. ಮೆಟ್ಟಿಲುಗಳನ್ನು ಹತ್ತುತ್ತಿರುವಂತೆ ಕೆಳ ಜಗುಲಿಯ ತುದಿಯಲ್ಲಿ ಪಳಪಳ ಹೊಳಪಿನ ಎರಡು ಹಿತ್ತಾಳೆ ಚೊಂಬುಗಳಲ್ಲಿ ನೀವು ಕಾಲು ತೊಳೆಯುವ ಸಲುವಾಗಿ ಬೆಳಗಿನಿಂದಲೂ ಕಾಯ್ದು ಕುಳಿತಿವೆ. ತಕ್ಷಣ ಅಲ್ಲೇ ಕಾಲು ತೊಳೆಯುವಂತಿಲ್ಲ. ನೋಡಿ ಸ್ವಲ್ಪ ದೂರದಲ್ಲಿ ತೊಂಡೆ ಬಳ್ಳಿಯ ಚಪ್ಪರ. ಅದರ ಹತ್ತಿರ ಹಾಕಿದ ಚಪ್ಪಡಿಯ ಮೇಲೆ ನಿಂತೇ ಕಾಲು ತೊಳೆದುಕೊಳ್ಳಬೇಕು. ಪ್ರತಿವರ್ಷ ಮಳೆಗಾಲ ಮುಗಿಯುವ ಸಮಯದಲ್ಲಿ ನಮ್ಮ ಚಿಕ್ಕಪ್ಪ ಅಂತಹ ಒಂದು ತೊಂಡೆಬಳ್ಳಿ ಚಪ್ಪರ ಹಾಕಿಬಿಡುತ್ತಾರೆ. ನಿಮ್ಮ ಹಾಗೆ ಬಂದವರ ಕಾಲು ತೊಳೆಯುವ ನೀರೇ ಅದರ ಆಧಾರ. ಅವರೂ ಸಹಾ ಆಗಾಗ ಜಾನುವಾರ ಸೆಗಣಿಯನ್ನು ಹಾಕುತ್ತಿರುತ್ತಾರೆ. ಅದನ್ನೇ ಅಲ್ಲವೆ ನಮ್ಮ ಸರ್ಕಾರೀ ಇಲಾಖೆ ಯವರು ಈಗ "ಕಿಚನ್ ಗಾರ್ಡನ್" (Kitchen Garden) ಎಂದು ಪ್ರಚಾರ ಮಾಡುತ್ತಿರುವುದು !

ಮತ್ತೆ ಮೆಟ್ಟಲು ಹತ್ತುತ್ತಿರುವಂತೆಯೇ ಮನೆಯ ಮೇಲು ಮಾಡಿನ ಜಂತಿನ ತೊಲೆಯ ಮೇಲೆ ಬರೆದಿರುವುದನ್ನು ನೋಡಿ. ಮಸುಕಾದ ಅಕ್ಷರಗಳು ಸರಿಯಾಗಿ ಕಾಣಿಸುತ್ತಿಲ್ಲವೆ ? ಅದನ್ನು ಬಹುಶಃ ಬಿಳೀ ನಾಮದ ಕಡ್ಡಿಯಿಂದ ಎಷ್ಟೋ ಹಿಂದೆ ಬರೆದದ್ದಿರಬೇಕು. ಹೊಗೆ ಹಿಡಿದು ಹಾಗಾಗಿದೆ. ಅದನ್ನು ನಾವೇ ಓದಿಬಿಡುತ್ತೇನೆ. "ಬನ್ನಿ ಸ್ವಾಮಿ, ಕುಳಿತುಕೊಳ್ಳಿ, ಕೈಕಾಲು ತೊಳೆದುಕೊಳ್ಳಿ, ಗಂಗಾ ಉದಕ ತೆಗೆದುಕೊಳ್ಳಿ" ಹೆಚ್ಚು ಕಡಿಮೆ ಒಂದು ಕಾಲದಲ್ಲಿ ಮಲೆನಾಡಿನ ಎಲ್ಲಾ ಗೃಹಸ್ಥರ ಮನೆಗಳಲ್ಲಿ ಕಾಣುತ್ತಿದ್ದ ಶಾಸನ ಬರವಣಿಗೆ ಅದು. ಮಲೆನಾಡಿನ ಆತಿಥ್ಯದ ಮೊದಲ ಆಹ್ವಾನವಾಗಿರುತ್ತಿತ್ತು. ಈ ಕಾಲದ ಅರೆಮನಸ್ಸಿನ ಆಹ್ವಾನವಲ್ಲ. ನಿಜವಾಗಿಯೂ ಮನಃಪೂರ್ವಕವಾಗಿ ನೀಡುತ್ತಿದ್ದ ಆತಿಥ್ಯದ ಸಂಕೇತ. ಬಿಸಿಲಿನಲ್ಲಿ ಬಹಳ ದೂರದಿಂದ ನಡೆದು ಬಂದವರಾದರೆ ಬೆಲ್ಲ-ನೀರೋ, ಪಾನಕವೋ ತತ್‌ಕ್ಷಣ ಮನೆ ಒಳಗಡೆಯಿಂದ ಬಂದುಬಿಡುತ್ತದೆ. ಬೆಳಿಗ್ಗೆ ಅಥವಾ ಸಾಯಂಕಾಲದ ಹೊತ್ತಿನಲ್ಲಾದರೆ ಕಾಫಿ ಲೋಟಗಳು ಹಾಜರಾಗುತ್ತವೆ. ಹೆಚ್ಚು ಹಾಲು ಹಾಕದ ಬೆಲ್ಲದ ಕಾಫಿ, "ಒಣ ಕಾಫಿ"ಯಂತಲೇ ವ್ಯಂಗ್ಯ ನಾಮಧೇಯ ಅದಕ್ಕೆ. ಇನ್ನು ನಮ್ಮ ಮನೆಗಳಲ್ಲಿ ಆಹಾರ ಸ್ವೀಕಸುವವಾದರೆ ಅವರಿಗೆ ಮತ್ತೆ ಕಾಫಿ-ತಿಂಡಿಯೋ, ಇಲ್ಲವೇ ಊಟದ ಹೊತ್ತಾಗಿದ್ದರೆ ಔತಣದ ಊಟ ತಯಾರಾಗುತ್ತದೆ. ಆಹಾರ ಸ್ವೀಕರಿಸದ ಬ್ರಾಹ್ಮಣರಾದರೆ ಅವರಿಗೆ ಅಡಿಗೆ ಮಾಡಿಕೊಳ್ಳಲು ಸಾಮಗ್ರಿಗಳು, ಚಿಕ್ಕಪುಟ್ಟ ಪಾತ್ರೆಗಳನ್ನು ತಂದಿಡುತ್ತಾರೆ. ನಮ್ಮ ಮನೆಯ ಅಂಗಳದಲ್ಲಿ ಬಹಳ ಕಾಲದಿಂದ ಇದ್ದ ಬೃಹತ್ ಹಾಲಿವಾಣದ ಮರದ ಬುಡದಲ್ಲಿ ಇಂತಹ ಅಡಿಗೆ ಮಾಡಿಕೊಳ್ಳುತ್ತಿದ್ದವರನ್ನು ನೋಡಿದ ನೆನಪಿದೆ ನನಗೆ. ಅಲ್ಲದೆ ಅದಕ್ಕೆಲ್ಲಾ ಪುರಸೊತ್ತಿಲ್ಲದೆ ತಕ್ಷಣ ಹೊರಡುವವರಾದರೆ ಗಟ್ಟಿ ತುಪ್ಪ, ಸಕ್ಕರೆ ಬಾಳೇ ಹಣ್ಣು ಮತ್ತು ಹಾಲು ಕುಡಿದಾದರೂ ಅವರು ನಮ್ಮ ಆತಿಥ್ಯವನ್ನು ಸ್ವೀಕರಿಸಲೇಬೇಕು. ಆ ಕಾಲದಲ್ಲಿ ನಮ್ಮ ಮನೆಗೆ ಬಂದವರಿಗೆಲ್ಲಾ ಒಂದಲ್ಲ ಒಂದು ರೀತಿಯ ಆತಿಥ್ಯ ಮಾಡುವುದು ಸದ್ಗೃಹಸ್ಥರೆಲ್ಲರ ಕರ್ತವ್ಯವೆಂಬ ನಂಬಿಕೆ ಎಲ್ಲರಲ್ಲಿತ್ತು.

ಇನ್ನು ನಮ್ಮ ಮನೆಯ ಪುರಾಣೇತಿಹಾಸ ಮತ್ತಿತರ ಪ್ರವರಗಳನ್ನೆಲ್ಲಾ ಹೇಳಿಬಿಡುತ್ತೇನೆ. ಮೊದಲೇ ಹೇಳಲಿಲ್ಲವೇ. ಇವೆಲ್ಲಾ ನಮ್ಮೂರ ನೆನಪುಗಳು ಎಂದು. ಬೇಸರಿಸಬೇಡಿ, ಸಾವಧಾನದಿಂದ ಆಲಿಸಿ :

ನಾನು ಹುಟ್ಟುವ 30-40 ವರ್ಷಗಳ ಹಿಂದೆಯೇ ನಮ್ಮ ಮನೆಯನ್ನು ಕಟ್ಟಿದ್ದರೆನಿಸುತ್ತದೆ. ನಮ್ಮ ಕಡೆ ಊರೆಂದರೆ ಒಂದೇ ಮನೆ ಎಂಬ ಪ್ರತೀತಿ ಇದ್ದರೂ ನಮ್ಮ ಮನೆಯ ಅಕ್ಕಪಕ್ಕದಲ್ಲಿ ಇನ್ನೆರಡು ಮನೆಗಳೂ ಇದ್ದವು. ನಮ್ಮ ಮನೆಯ ಬಲಭಾಗಕ್ಕೆ ಸ್ವಲ್ಪ ಮುಂಗಡೆ ಇದ್ದ "ಹೊಸಮನೆ" ಮತ್ತು ಎಡಭಾಗಕ್ಕೆ ಸ್ವಲ್ಪ ಹಿಂದುಗಡೆ "ಹಕ್ಕಲು ಮನೆ" ಎಂಬ ನಮ್ಮ ದಾಯಾದಿಗಳ ಮನೆ ಇದ್ದವು. ಮಂಗಳೂರು ಹೆಂಚಿನ

ಒಂದು ಅಂತಸ್ತಿನ ಮನೆಗಳವು. ದುರದೃಷ್ಟದ ಸಂಗತಿಯೆಂದರೆ ಆ ಎರಡು ಕುಟುಂಬದ ಗಂಡಸರೆಲ್ಲ ಅವಸಾನವಾಗಿದ್ದು, ಗಂಡು ಸಂತತಿಗಳೇ ಇಲ್ಲದಿದ್ದುದರಿಂದ ಅವು ಹೆಚ್ಚು ಕಾಲ ಮುಂದುವರಿಯಲಿಲ್ಲ. ನನ್ನ ಬಾಲ್ಯ ಯೌವನಾವಸ್ಥೆಗಳ ಸಮಯದಲ್ಲಿ ಅವುಗಳಲ್ಲಿ ಆಟವಾಡಿಕೊಂಡು ಊಟ, ತಿಂಡಿ ತಿಂದ ಜ್ಞಾಪಕವಿದೆ. ಕ್ರಮೇಣ ಆ ಮನೆಗಳು ಇಲ್ಲವಾದವು. "ಹಳೇ ಮನೆ" ಎಂದು ಕರೆಸಿಕೊಳ್ಳುತ್ತಿದ್ದ ನಮ್ಮ ಮನೆಗೆ ಭವಿಷ್ಯವಿದ್ದು, ಮುಳುಗಡೆಯಾಗುವವರೆಗೂ ಇದು ಅಂತಿಮವಾಗಿ ಊರಂದರೊಂದೇ ಮನೆಯಾಗಿ ಬಿಟ್ಟಿತ್ತು! ಸುಮಾರು ಒಂಭತ್ತು ಅಂಕಣ, ಮಂಗಳೂರು ಹೆಂಚು ಹೊದಿಸಿದ್ದ ಎತ್ತರದ ಮಹಡಿಯ ಮನೆಯಾಗಿತ್ತು. ಮಲೆನಾಡಿನ ಮಳೆಗಾಳಿಗಳ ಆರ್ಭಟವನ್ನು ತಾಳಿಕೊಳ್ಳುವಷ್ಟು ಭದ್ರವಾಗಿ ಕಟ್ಟಿದ್ದರು. ಮನೆ ಕಟ್ಟುವ ಸಮಯದ ನೆಲಗಟ್ಟಿನ ಹಸಿಮಣ್ಣಿನ ಮೇಲೆ ಒಂದು ರಾತ್ರಿ ಹುಲಿಯೊಂದು ನಡೆದಾಡಿದ ಹೆಜ್ಜೆಗಳಿದ್ದವಂತೆ. ಆದುದರಿಂದ ಅದೇನೂ ಸಾಮಾನ್ಯದ ಮನೆಯೆಂದು ತಿಳಿಯಬೇಡ ಎಂದು ನಮ್ಮಲ್ಲಿ ಕೆಲವರು ಬೀಗುತ್ತಿದ್ದರು. ಹೌದು, ಹುಲಿ ಬೇಟೆಯಾಡಿದ ಕೆಲವರು ನಮ್ಮ ಮನೆಯಲ್ಲಿ ಹುಟ್ಟಿದ್ದರು ! ಮಲೆನಾಡಿನ ಎಲ್ಲಾ ಮನೆಗಳಂತೆ ನಿಜಮನೆ, ಅದರ ನಾಲ್ಕು ಕಡೆ ಬಾಗಿದ ಮಾಡಿನ ಕಡಿಮಾಡುಗಳಿದ್ದವು. ನಿಜ ಮನೆಯಲ್ಲಿ ಮೇಲಿನ ಜಗುಲಿ, ಒಳಭಾಗದ ದೊಡ್ಮನೆ, (ನಡುಮನೆ) ಅದರ ಪಕ್ಕದಲ್ಲೇ "ಶನಿವಾರದ ಮನೆ"ಗಳಿದ್ದವು. ನಡುಮನೆ ಈ ಕಾಲದ ಮನೆಗಳಲ್ಲಿರುವ "ಹಾಲ್" ಎನ್ನಬಹುದೇನೋ. ಸಾಮಾನ್ಯವಾಗಿ ಮಹಿಳೆಯರು ಮಲಗುವುದು, ಹಬ್ಬ-ಹುಣ್ಣಿಮೆಗಳಲ್ಲಿ ಊಟ ಹಾಕುವುದು, ಮದುವೆ ಸಂದರ್ಭದಲ್ಲಿ ವಧೂವರರನ್ನು ಕೂರಿಸಿ 'ಶಾಸ್ತ್ರ' ಜರುಗಿಸುವ ತಾಣ ಅದಾಗಿರುತ್ತಿತ್ತು. ಒಂದು ಮೂಲೆಯಲ್ಲಿ ನೆಲದಿಂದ 2-3 ಅಡಿಗಳಷ್ಟು ಎತ್ತರದಲ್ಲಿ ಮರದ ಕಂಬ ಒಂದರ ಸಹಾಯದಿಂದ ನಿಲ್ಲಿಸಿದ "ದ್ಯಾವರ ಹಲಗೆ" ಇರುತ್ತಿತ್ತು. ವಿಶೇಷ ಸಂದರ್ಭಗಳಲ್ಲಿ ದೇವರ ಕಳಶ, ದೀಪ ಮುಂತಾದವುಗಳನ್ನು ಇಡುವುದಕ್ಕಾಗಿ ನಿರ್ಮಾಣವಾದುದು. ದೊಡ್ಮನೆಯನ್ನು ಪ್ರವೇಶಿಸಿ ಮತ್ತೆ ಹೊರಗೆ ಹೋಗುವ ಎರಡು ಬಾಗಿಲುಗಳನ್ನು ಹೊರತುಪಡಿಸಿದರೆ, ಬೆಳಕಿಗೆ ಮತ್ತಾವ ವ್ಯವಸ್ಥೆಯೂ ಅದಕ್ಕಿರುತ್ತಿರಲಿಲ್ಲ. ಇನ್ನು ಶನಿವಾರದ ಕೋಣೆಯೆಂದರೆ ಪವಿತ್ರವೆನಿಸಿದ ಶ್ರಾವಣಗಳಂತ ಸಮಯದಲ್ಲಿ "ಜೈನ ಅಡಿಗೆ" ಮಾಡುವುದಕ್ಕೆ ಮೀಸಲು. ಈ ಕೋಣೆಯಿಂದಲೇ ಉಪ್ಪರಿಗೆಗೆ ಹೋಗುವ ಏಣಿಯ ಏರ್ಪಾಡು. ಹಿಂಭಾಗದ ಕಡಿಮಾಡಿನಲ್ಲಿ ಅಡಿಗೆ ಮಾಡುವ ವ್ಯವಸ್ಥೆಗಳು. ಉಳಿದ ಅಕ್ಕಪಕ್ಕದ ಕಡಿಮಾಡುಗಳಲ್ಲಿ ಮದುವೆಯಾದವರ ಸಂಸಾರ ನಿರ್ವಹಣೆಯ ಕೊಠಡಿಗಳು. ಮುಂದೆ ನಮ್ಮವರ ಸಂಸಾರಗಳು ವಿಸ್ತಾರಗೊಂಡತೆಲ್ಲಾ ಈ ಕಡಿಮಾಡುಗಳೇ ಪಕ್ಕಪಕ್ಕಕ್ಕೇ ವಿಸ್ತರಿಸಿ ಕೊಠಡಿಗಳು ನಿರ್ಮಾಣವಾದವು. ಮುಂದೆ ಬರುಬರುತ್ತಾ ನಿಜಮನೆಗಿಂತ ಹೀಗೆ ವಿಸ್ತಾರಗೊಂಡ ಕಟ್ಟಡಗಳೇ ಹೆಚ್ಚಾಗಿದ್ದು ಅದೊಂದು ಬೃಹದಾಕಾರ ಜೇನುಗೂಡಿನಂತಾಗಿತ್ತು.

ಮನೆಯ ಹಿಂಭಾಗಬ ಕಡಿಮಾಡಿನ ಸನಿಹದಲ್ಲೇ ದನದ ಕೊಟ್ಟಿಗೆಗಳು, "ಮುರ"

ಬೇಯಿಸುವ ಕೊಟ್ಟಿಗೆ, ಕಟ್ಟಿಗೆ ದಾಸ್ತಾನು ಮಾಡುವ ಕೊಟ್ಟಿಗೆ ಮುಂತಾದವು ಇರುತ್ತಿದ್ದವು. ಮಳೆಗಾಳಿ ನುಗ್ಗದಂತೆ ಕಟ್ಟುತ್ತಿದ್ದ ಈ ಕಟ್ಟಡ ಸಮುಚ್ಚಯಗಳಲ್ಲಿ ಗಾಳಿ ಬೆಳಕುಗಳೂ ಯಾವಾಗಲೂ ಅಪರೂಪದ ವಸ್ತುಗಳೆಂದೇ ಹೇಳಬೇಕು. ಅವುಗಳ ಒಳಗಡೆಯೇ ಬೆಳಗಿನಿಂದ ಸಾಯಂಕಾಲದವರೆಗೂ ಅಡಿಗೆ ಕೈಂಕರ್ಯ ಎಡೆಬಿಡದೇ ಸಾಗುತ್ತಿದ್ದು, ಇಡೀ ಮನೆಯಲ್ಲಿ ಹೊಗೆ ತುಂಬಿಕೊಂಡಿರುತ್ತಿತ್ತು. ಮನೆಯಲ್ಲಿ ಸದಾ ಕಾರ್ಯನಿರ್ವಹಿಸುತ್ತಿದ್ದ ಹೆಂಗಸರ ಕಣ್ಣುಗಳಂತೂ ಕೆಂಪಾಗಿ ನೀರು ಸುರಿಯುವುದು ಸಾಮಾನ್ಯ. ಆದರೆ ಮನೆಗಳಲ್ಲಿ ಹಾಗೆ ಹೊಗೆಯಾಡುತ್ತಿದ್ದರೆ ಮನೆ ಕಟ್ಟಲು ಉಪಯೋಗಿಸಿದ ನಾಟಾಗಳು ಬಹು ಕಾಲ ಬಾಳಿಕೆ ಬರುತ್ತವೆಂಬುದು ಪುರುಷ ವರ್ಗದವರ ಅಂಬೋಣ !

ನನಗೆ ನೆನಪಿರುವಾಗಿನಿಂದಲೂ ನಮ್ಮದೇ ಆಸುಪಾಸಿನಲ್ಲೆಲ್ಲಾ ಬಹುದೊಡ್ಡ ಕುಟುಂಬ. ಅಕ್ಷರಶಃ ದೊಡ್ಡ ಅವಿಭಾಜ್ಯ ಕುಟುಂಬ - ಆದಾಯಕರ ಇಲಾಖೆಯವರ ಎಚ್.ಯು.ಎಫ್ (ಹಿಂದೂ ಅನ್ ಡಿವೈಡೆಡ್ ಫ್ಯಾಮಿಲಿ). ಮಕ್ಕಳು ಮರಿ, ದೊಡ್ಡವರೆಲ್ಲಾ ಸೇರಿ ಸುಮಾರು 45-50 ಜನ ಇರುತ್ತಿದ್ದರು. ಅಂತಹ ಒಂದು ಸಂಸಾರ ಪ್ರಸ್ತುತ ಅಪರೂಪ. ಎಲ್ಲೋ, ಅಲ್ಲೊಂದು ಇಲ್ಲೊಂದು ಉಳಿದುಕೊಂಡು ವೃತ್ತಪತ್ರಿಕೆಗಳ ವರದಿ ಗಾರರಿಗೆ ಗ್ರಾಸ ಒದಗಿಸುವುದನ್ನು ನೋಡಬಹುದು.

ನಾನು ಹುಟ್ಟಿದ ಒಂದೇ ವರ್ಷದಲ್ಲಿ ನನ್ನ ತಂದೆ ದುಗ್ಗಪ್ಪಗೌಡರು ತೀರಿಕೊಂಡ ರಂತೆ. ಅವರ ವ್ಯಕ್ತಿತ್ವ, ಗುಣ ನಡತೆಗಳನ್ನು ಇತರರು ವಿವರಿಸುತ್ತಾರಾದರೂ ನನಗೆ ಅವರ ನೆನಪಿಲ್ಲ. ಈ ಎಲ್ಲಾ ನೆನಪುಗಳು ನನ್ನ ಮನಃಪಟಲದಲ್ಲಿ ಮೂಡಿ ಬರುತ್ತಿರುವಾಗ ನನ್ನ ತಂದೆಯ ನೆನಪೇ ಇಲ್ಲವಲ್ಲಾ ಎಂಬ ಕೊರಗು ಸದಾ ನನ್ನದಾಗಿ ಉಳಿದುಕೊಂಡಿದೆ. ಹಳ್ಳಿಗಳಲ್ಲಿ ಸಾಮಾನ್ಯವಾಗಿ "ಕೈಮಸಕು" ಅಥವಾ "ಮದ್ದಿಡುವುದು" ಎಂಬುದಕ್ಕೆ ಬಲಿ ಯಾದರೆಂದು ನನ್ನ ತಾಯಿ ಮತ್ತಿತರರು ಹೇಳುವರಾದರೂ, ಅವರು ಆ ಕಾಲದಲ್ಲಿ ವ್ಯಾಪಕ ವಾಗಿರುತ್ತಿದ್ದ ಮಲೇರಿಯಾ ಜ್ವರದ ತೊಡಕುಗಳಿಂದ ಸತ್ತಿರಬಹುದೆಂಬುದು ನನ್ನ ಈಗಿನ ಅಭಿಪ್ರಾಯ. ಜೀವಿಸಿರುವವರೆಗೂ ಅವರೇ ಮನೆ ಯಜಮಾನಿಕೆಯನ್ನು ನಿರ್ವಹಿಸುತ್ತಿದ್ದ ರಂತೆ. ಅವರ ಕಾಲಾನಂತರ ಅವರ ತಮ್ಮ ಮಂಜಪ್ಪಗೌಡರು ಆ ಜವಾಬ್ದಾರಿಯನ್ನು ವಹಿಸಿಕೊಂಡರು. ಮುಂದೆ ಹಲವಾರು ದಶಕಗಳು ಅವರೇ ಆ ಅವಿಭಾಜ್ಯ ಕುಟುಂಬದ ಕರ್ತೃವಾಗಿದ್ದರು. ಅವರಲ್ಲದೆ, ಇನ್ನೂ 4-5 ಜನ ಚಿಕ್ಕಪ್ಪಂದಿರಿದ್ದು ಅವರೆಲ್ಲರ ಹೆಂಡಿರು ಮಕ್ಕಳುಗಳಿಂದ ನಮ್ಮ ಕುಟುಂಬ ಸಮೃದ್ಧವಾಗಿತ್ತು.

ನಮ್ಮ ಕುಟುಂಬಕ್ಕೆ ಸುಮಾರು 50 ಎಕರೆಗಳಿಗಿಂತಲೂ ಹೆಚ್ಚು ಜಮೀನು ಇತ್ತೆ ನಿಸುತ್ತದೆ. ಅದನ್ನೆಲ್ಲಾ ಉತ್ತುಬಿತ್ತಿ ವ್ಯವಸಾಯ ಮಾಡಿಸಿ, ಅಡಕೆ ತೋಟಗಳ ಕಾಮಗಾರಿ ಮತ್ತಿತರ ಕೆಲಸಗಳನ್ನು ನಿರ್ವಹಿಸುವುದೆಂದರೆ ಸಾಮಾನ್ಯ ವಿಷಯವಾಗಿರುತ್ತಿರಲಿಲ್ಲ. ವ್ಯವ ಸಾಯಕ್ಕೆ ಸಂಬಂಧಿಸಿದ ವಿವಿಧ ಬಗೆಯ ಕೆಲಸಕಾರ್ಯಗಳನ್ನು ವಯಸ್ಕ ಗಂಡಸರ ನಡುವೆ

ಹಂಚಲಾಗುತ್ತಿತ್ತು. ಮುಖ್ಯವಾಗಿ ಅಡಿಕೆ ತೋಟಗಳ ಬೇಸಾಯ, ಕೊಳೇರೋಗ ಬರದಂತೆ ಔಷಧಿ ಹೊಡೆಸುವುದು, ಕೊನೆ ತೆಗೆಸುವುದು, ಮುಂತಾದವು ಒಬ್ಬರ ಜವಾಬ್ದಾರಿಯಾದರೆ ಅವುಗಳ ಸುಲಿಸಿ, ಬೇಯಿಸಿ, ಒಣಗಿಸಿ, ಆರಿಸಿ ಅಡಿಕೆ ಮಂಡಿಗಳಿಗೆ ಕಳುಹಿಸುವುದು ಇನ್ನೂ ಒಂದಿಬ್ಬರ ಜವಾಬ್ದಾರಿಯಾಗುತ್ತಿತ್ತು. ಗದ್ದೆಗಳ ಹೂಟಿ, ಬೀಜ ಬಿತ್ತಿ ಸಸಿ ಮಾಡಿ, ನಾಟಿ ಹಾಕಿಸುವುದು ಇನ್ನೂ ಕೆಲವರ ಪಾಲಿಗೆ ಬರುತ್ತಿತ್ತು. ಮುಂದೆ ಗದ್ದೆ ಕೊಯ್ಲು, ಒಕ್ಕುವುದು ಮುಂತಾದವೂ ಸಹಾ ಈ ರೀತಿಯ ಜವಾಬ್ದಾರಿಯ ಹಂಚಿಕೆಯಿಂದಲೇ ನಡೆಯುತ್ತಿದ್ದವು. ಅಂದರೆ ಒಂದು ವಿಭಾಗದ ಜವಾಬ್ದಾರಿ ವಹಿಸಿಕೊಂಡವರು ಇತರ ವಿಭಾಗಗಳ ಕೆಲಸಗಳಲ್ಲಿ ಕೈ ಹಾಕುತ್ತಿರಲಿಲ್ಲವೆಂದರ್ಥವಲ್ಲ. ಸಾಮೂಹಿಕವಾಗಿ ಜರುಗಬೇಕಾದ ಕೆಲಸ ಕಾರ್ಯಗಳಲ್ಲಿ ಎಲ್ಲರೂ ಭಾಗವಹಿಸುತ್ತಿದ್ದರು. ಮೇಲ್ನೋಟಕ್ಕೆ ಈ ವ್ಯವಸ್ಥೆ ಉತ್ತಮವಾಗಿರಬಹುದೆಂದರೂ ಆಗಾಗ್ಗೆ ಮನಸ್ತಾಪಗಳುಂಟಾಗಿ ವ್ಯವಸ್ಥೆ ಕುಸಿದು ಬೀಳದೇ ಇರುತ್ತಿರಲಿಲ್ಲ. ಹತ್ತಿರದ ಸಂಬಂಧಿಕರು ಎಲ್ಲರನ್ನೂ ಸೇರಿಸಿ ಪಂಚಾಯಿತಿ ಮಾಡಿಸಿ ಯಥಾಸ್ಥಿತಿಯನ್ನುಂಟು ಮಾಡುತ್ತಿದ್ದು ಅಪರೂಪವೇನಲ್ಲ.

ಹೊರಗಿನ ಕೆಲಸಗಳಲ್ಲಿ ಗಂಡಸರದು ಪ್ರಮುಖ ಪಾತ್ರವಾದರೆ ಅಡಿಗೆ ಮತ್ತು ದನಕರುಗಳ ಹಾಲು ಕರೆದು, ಮಜ್ಜಿಗೆ, ಬೆಣ್ಣೆ, ತುಪ್ಪಗಳ ತಯಾರಿ ಹೆಂಗಸರ ಜವಾಬ್ದಾರಿಯಾಗುತ್ತಿತ್ತು. ವಾರ ವಾರ ಬದಲಾಗುವ ಸರದಿಯಲ್ಲಿ ಅವರು ಕಾರ್ಯನಿರ್ವಹಿಸುತ್ತಿದ್ದರು. ಅಷ್ಟೊಂದು ಜನರಿರುತ್ತಿದ್ದ ಮನೆಯವರೇ ಅಲ್ಲದೆ ಕೆಲಸಗಳಿಗೆ ಬರುತ್ತಿದ್ದ ಆಳುಗಳಿಗೂ ಅಡಿಗೆ ಮಾಡಿ ಬಡಿಸುವುದು ತುಂಬಾ ಕಷ್ಟದ ಕೆಲಸವೇ ಆಗುತ್ತಿತ್ತು. ಸರದಿ ಯಾರದ್ದೇ ಆಗಿದ್ದರೂ ಉಳಿದವರು ಸಹಕರಿಸುತ್ತಿದ್ದುದು ಒಂದು ವೈಶಿಷ್ಟ್ಯ

ಮನೆಯೊಳಗಿನ ಕೆಲಸ ಹೆಂಗಸರದಾಗಿರುತ್ತಿದ್ದರೂ ಸಸಿ ನೆಟ್ಟಿ, ಗದ್ದೆ ಕೊಯಿಲು ಒಕ್ಕಲಾಟ, ಅಡಿಕೆ ಸುಲಿಯಬೇಕಾದ ಶ್ರಾಯಗಳಲ್ಲಿ ಹೆಂಗಸರೂ ಸಹ ಭಾಗವಹಿಸುವುದು ಅನಿವಾರ್ಯವಾಗುತ್ತಿತ್ತು.

ಇವೆಲ್ಲದರ ಜತೆಗೆ ಮನೆಯಲ್ಲಿ ಪ್ರತಿವರ್ಷಜರುಗುತ್ತಿದ್ದ ಮದುವೆ, ಬಾಣಂತನ, ಹಬ್ಬಹುಣ್ಣಿಮೆ, ಕಾಯಿಲೆ ಕಸಾಲೆಗಳಲ್ಲೂ ಎಲ್ಲರನ್ನೂ ಬಹುಪಾಲು ಒಂದೇ ಸಮನೆ ನೋಡಿಕೊಳ್ಳಬೇಕಾಗುತ್ತಿತ್ತು. ಹಾಗೇನಾದರೂ ವ್ಯತ್ಯಾಸಗಳಾಗುವುದು ಕಂಡುಬಂದರೆ ಮನಸ್ತಾಪ, ಅಸಹಕಾರ ಆಗುತ್ತಿದ್ದವಾದರೂ, ಅವು ಅಪರೂಪವೆಂದೇ ಹೇಳಬೇಕು. ಹೀಗೆ ಒಂದು ವ್ಯವಸ್ಥಿತ ರೀತಿಯಲ್ಲಿ ಸಮಷ್ಟಿ ಕುಟುಂಬವನ್ನು ನಿಭಾಯಿಸುವುದು, ಅದರ ಯಜಮಾನರ ನಿಸ್ವಾರ್ಥ ಮನೋಭಾವ, ಯಾವುದರಲ್ಲೂ ಸ್ವಂತಕ್ಕಾಗಿ ಸಂಪಾದನೆಗಿಳಿಯುವುದು, ಸ್ವಜನ ಪಕ್ಷಪಾತ ಮಾಡಿದರೆ ಅಂತಹ ಸಂಸಾರಗಳು ಬಹಳ ಬೇಗ ಒಡೆದು ಹೋಗುವುದು ಸ್ವಾಭಾವಿಕ. ಆದರೆ ನಮ್ಮ ಮನೆಯ ಯಜಮಾನರಾದ ಮಂಜಪ್ಪಗೌಡರು ಅವಿದ್ಯಾವಂತರಾಗಿದ್ದರೂ, ಅಂತಹ ಯಾವುದೇ ಕೃತ್ಯಗಳಿಗಿಳಿದವರಲ್ಲ. ನಮ್ಮ ಆಸುಪಾಸಿನ

ಇಂತಹ ಹಲವು ಸಂಸಾರಗಳಲ್ಲಿ ಪ್ರತಿವರ್ಷ ಆಸ್ತಿಯ ಪಾಲು ಪಚ್ಚಡಿಗಳಾಗುತ್ತಿದ್ದರೂ ನಮ್ಮದು ಬಹಳ ಕಾಲ ಮುಂದುವರಿದದ್ದೇ ಹೆಮ್ಮೆಯ ವಿಷಯ. ಇತ್ತೀಚಿನ ಗಂಡ-ಹೆಂಡತಿ, ಮಗುವಿನ ಚಿಕ್ಕ ಕುಟುಂಬಗಳನ್ನು ನೋಡಿದಾಗ ಅಂತಹ ಒಂದು ಕುಟುಂಬ ನಿಕಟ ಪೂರ್ವದಲ್ಲಿತ್ತೆಂಬುದನ್ನು ನಂಬುವುದು ಸಾಧ್ಯವಿಲ್ಲ. ನನಗಂತೂ ಎಳೆಯ ವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡು ಅನಾಥನಾಗಿ ಆ ಮನೆಯಲ್ಲಿ ಎಲ್ಲರ ಮುದ್ದಿನ ಕೂಸಾಗಿ, ದೊಡ್ಡವನಾದ ಮೇಲೂ ಯಾರೊಬ್ಬರ ಪ್ರೀತಿ, ವಿಶ್ವಾಸಗಳಿಗೆ ಧಕ್ಕೆಯಾಗದಂತೆ ಕಳೆದ ಅಂದಿನ ದಿನಗಳ ನೆನಪು ಈಗಲೂ ಆಗಾಗ್ಗೆ ಮರುಕಳಿಸುತ್ತವೆ. ಕಾಲಾಂತರದಲ್ಲಿ ನಮ್ಮ ಕುಟುಂಬವೂ ಕಾಲಸ್ಥಿತಿಗಳಿಗನುಗುಣವಾಗಿ ಹಲವು ಸಾರಿ ವಿಭಜನೆಯಾಯಿತು. ಈಗಂತೂ ಮುಳುಗಡೆಯಿಂದಾಗಿ ನಮ್ಮವರೆಲ್ಲಾ ದೂರ ದೂರದ ಊರುಗಳಲ್ಲಿ ತಮ್ಮ ಜೀವನ ಸಾಗಿಸುವಂತಾಗಿಬಿಟ್ಟಿದೆ. ಆಗಾಗ್ಗೆ ನಾವು ಸೇರುವ ಅವಕಾಶಗಳು ಒದಗಿ ಬರುವುದಾದರೂ, ಅಂದಿನ ಸಮಷ್ಟಿ ಕುಟುಂಬದ ಸಮರಸ ಜೀವನದ ಅನುಭವಗಳೆಲ್ಲಿ? ಕಾಲಾಯ ತಸ್ಮೈ ನಮಃ ಎನ್ನೋಣವೇ.

## ಅಸ್ಥಿ ಚಿಕಿತ್ಸಾ ನೈಪುಣ್ಯತೆ

ಮೀನು ಹಿಡಿಯುವಂಥ ಸ್ವಪ್ರಯೋಜನದ ಹವ್ಯಾಸ ನಮ್ಮವರಲ್ಲಿದ್ದಂತೆಯೇ ಪರೋಪಕಾರ ಪ್ರವೃತ್ತಿಯೊಂದನ್ನೂ ಸಹಾ ಮುಂದುವರಿಸಿಕೊಂಡು ಬಂದ ವಿಚಾರವನ್ನು ಈಗ ಪ್ರಸ್ತಾಪಿಸಬಹುದೆನಿಸುತ್ತದೆ. ಅದೆಂದರೆ ಕೈಕಾಲು ಮುರಿದ ಜನ ಜಾನುವಾರುಗಳಿಗೆ ಮದ್ದು ನೀಡುವುದು. ಬರೇ ಮದ್ದು ನೀಡುವುದಲ್ಲದೆ ಅವುಗಳನ್ನು ಎಳೆದು ಸರಿಯಾಗಿ ಕೂಡಿಸಿ ಪಟ್ಟಿ ಕಟ್ಟಿ ಗುಣಪಡಿಸುವುದರಲ್ಲಿ ನಿಷ್ಣಾತರಾಗಿದ್ದರು.

ಈ ರೀತಿಯ ವೈದ್ಯಕೀಯ ಸೇವೆ ನಮ್ಮ ಮನೆತನದಲ್ಲಿ ಎಂದಿನಿಂದ ಮೊದಲಾಯಿತೆಂಬುದು ಸರಿಯಾಗಿ ತಿಳಿದುಬಂದಿಲ್ಲ. ಆದರೆ ನನಗೆ ಜ್ಞಾಪಕವಿರುವಾಗಿನಿಂದಲೂ ಹಲವಾರು ಜನ ಆ ಸಲುವಾಗಿ ನಮ್ಮನೆಗೆ ಬರುತ್ತಿದ್ದರು. ಮುರಿದ ಮೂಳೆಗಳು ಕೂಡಿಕೊಳ್ಳುವುದಕ್ಕೆ ನಮ್ಮವರು ಕೊಡುತ್ತಿದ್ದ ಒಂದು ಬಗೆಯ ಸೊಪ್ಪಿನ ಮಹತ್ವದ ಬಗೆಗೆ ಒಂದು ಐತಿಹ್ಯವಿದ್ದಿದ್ದನ್ನು ಕೇಳುತ್ತಿದ್ದೆ. ಬಹಳ ವರ್ಷಗಳ ಹಿಂದೆ ಶಿಕಾರಿಗೆ ಹೋಗಿದ್ದಾಗ ಪ್ರಾಣಿಯೊಂದನ್ನು ಹಸಿಗೆ ಮಾಡಿ ಕತ್ತರಿಸಿ ಈ ಸೊಪ್ಪಿನ ಎಲೆಗಳನ್ನು ಸೇರಿಸಿ ಸುತ್ತಿಕೊಂಡು ಮನೆಗೆ ಬಂದಿದ್ದರಂತೆ. ಮನೆಯಲ್ಲಿ ಬಿಚ್ಚಿ ನೋಡಿದಾಗ ಕತ್ತರಿಸಿದ ಮಾಂಸದ ತುಂಡುಗಳು ಒಂದಕ್ಕೊಂದು ಕೂಡಿಕೊಂಡಿದ್ದವಂತೆ! ಬಹುಶಃ ಅದರಿಂದ ಪ್ರೇರಿತವಾಗಿ ಮುಂದೆ ಮೂಳೆ ಮುರಿತಗಳ ಚಿಕಿತ್ಸೆಗೆ ಆ ಸೊಪ್ಪಿನಿಂದ ತಯಾರಿಸಿದ ಮುದ್ದೆಗಳನ್ನು ನೀಡುವ ಅಭ್ಯಾಸ ಉಂಟಾಗಿರಬೇಕು.

ನನಗೆ ಜ್ಞಾಪಕವಿರುವಾಗಿನಿಂದ ನನ್ನ ಚಿಕ್ಕಪ್ಪ ದೊಡ್ಡ ಶಿದ್ದಪ್ಪಗೌಡರೇ ಈ

ಔಷಧಿಯನ್ನು ತಯಾರು ಮಾಡಿಕೊಡುತ್ತಿದ್ದವರು. ಮುರಿದ ಮೂಳೆಯ ತುದಿಗಳನ್ನು ಎಳೆದು ಸರಿಯಾಗಿ ಕೂಡಿಸುವುದನ್ನು ಸಹಾ ಅವರು ಅರಿತಿದ್ದರು. ಹಾಗೇ ಅವು ಕೂಡಿದ ಅಂದಾಜಾದರೆ ಅವು ತಪ್ಪಿ ಹೋಗದಂತೆ ಒಂದು ಜಾತಿಯ ಗಿಡದ ಖಾಂಡವನ್ನು (ಮುಂಡುಗದ ಗಿಡ) ಜಜ್ಜಿ ಪಟ್ಟಿಯಂತೆ ಮಾಡುತ್ತಿದ್ದರು. ಅಂತಹ ಎರಡು ಪಟ್ಟಿಗಳನ್ನು ಮುರಿದ ಜಾಗದ ಎದಿರುಬದಿರು ಇಟ್ಟು ಗಟ್ಟಿಯಾಗಿ ಬಟ್ಟೆಯಿಂದ ಬಿಗಿದು ಕಟ್ಟುತ್ತಿದ್ದರು. ಅದನ್ನು ಬಿಚ್ಚಲು ಅವರದೇ ಅನುಭವದ ಗಡುವನ್ನು ನೇಮಿಸುತ್ತಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಕೀಲುಗಳು ತಪ್ಪಿದವರನ್ನೂ ಸರಿಯಾಗಿ ಎಳೆದು ಕೂಡಿಸುವುದರಲ್ಲಿ ಅವರು ನಿಷ್ಣಾತರಾಗಿದ್ದರು. ಒಂದು ಸಾರಿ ನಮ್ಮ ಊರ ಹತ್ತಿರದಲ್ಲಿರುವ ಇತಿಹಾಸ ಪ್ರಸಿದ್ಧ ಕವಲೇ ದುರ್ಗದ ಮಠದಲ್ಲಿನ ವಯಸ್ಸಾದ ಮಹಿಳೆಯೊಬ್ಬರ ಸೊಂಟದ ಕೀಲು ತಪ್ಪಿತ್ತಂತೆ. ಅದನ್ನು ಸರಿಪಡಿಸಲು ಅವರನ್ನು ತೀರ್ಥಹಳ್ಳಿ ಮತ್ತು ಶಿವಮೊಗ್ಗೆಯ ಆಸ್ಪತ್ರೆಗಳಿಗೂ ಕೊಂಡು ಹೋಗಿದ್ದರೂ ಪ್ರಯೋಜನವಾಗಿರಲಿಲ್ಲವಂತೆ. ಮುಂದೆ ನಮ್ಮ ಚಿಕ್ಕಪ್ಪನವರೇ ಅದನ್ನು ಎಳೆದು ಕೂಡಿಸಿದರಂತೆ ! ಅವರ ಅನುಭವದ ಪ್ರಯೋಜನ ಎಲ್ಲರಿಗೂ ತಿಳಿಯಲೆಂದು ಮಠದವರು ಕರಪತ್ರಗಳನ್ನು ಪ್ರಕಟಿಸಿ ಹಂಚಿದ್ದರು. ಅದನ್ನು ತಿಳಿದವರೊಬ್ಬರು ಅವರನ್ನು ಇಂತಹ ಚಿಕಿತ್ಸೆಗಾಗಿ ಭದ್ರಾವತಿಗೂ ಕರೆದುಕೊಂಡು ಹೋಗಿದ್ದರು.

ಮೆಡಿಕಲ್ ವಿದ್ಯಾರ್ಥಿಯಾಗಿ ರಜೆಯಲ್ಲಿ ಇರುತ್ತಿದ್ದಾಗ ಕೈಕಾಲು ಮುರಿದವರು ಮನೆಗೆ ಬಂದಾಗ ಕೆಲವರು "ಹೊಸ ಡಾಕ್ಟರನ್ನು ನೋಡಲು ಬಂದಿರೋ, ಹಳೇ ಡಾಕ್ಟರನ್ನು ನೋಡಲು ಬಂದಿರೋ" ಎಂದು ತಮಾಷೆ ಮಾಡುವುದು ವಾಡಿಕೆಯಾಗಿತ್ತು. ನನ್ನದು ಅಸೂಯೆಗಿಂತ ಹೆಮ್ಮೆಯ ಸಂಗತಿಯಾಗುತ್ತಿತ್ತು.

ದೊ|| ಶಿದ್ದಪ್ಪಗೌಡರು ಔಷಧಿಯನ್ನು ತಯಾರಿಸುತ್ತಿದ್ದುದು ತುಂಬಾ ಗುಟ್ಟಾಗಿ. ಬಹುಶಃ ಸೋಮವಾರ ಮತ್ತು ಗುರುವಾರಗಳಲ್ಲಿ ಮಾತ್ರ ಅವರು ಔಷಧಿ ಕೊಡುತ್ತಿದ್ದುದು. ಮನೆಗೆ ಆ ಸಲುವಾಗಿ ಯಾರಾದರೂ ಬಂದ ಕೂಡಲೇ ಅವರೊಬ್ಬರೇ ಹತ್ತಿರದ ಕಾಡಿಗೆ ಹೋಗಿ ಆ ಗಿಡದ ಎಲೆಗಳನ್ನು ಕೀಳುತ್ತಿದ್ದರು. ಅವುಗಳ ಗುರುತು ಯಾರಿಗೂ ತಿಳಿಯಬಾರದೆಂದು, ಅಲ್ಲೇ ಎಲೆಗಳನ್ನೆಲ್ಲಾ ಚೂರು ಚೂರಾಗಿ ಕತ್ತರಿಸಿ, ಒಂದು ಬಟ್ಟೆಯಲ್ಲಿ ತುಂಬಿ ತರುತ್ತಿದ್ದರು. ಮನೆಗೆ ಬಂದ ನಂತರ ನಮ್ಮಲ್ಲಿ ಹೊರಗಡೆ ಪ್ರತ್ಯೇಕವಾಗಿ ಇರಿಸಿದ್ದ ಕಡೆಯುವ ಕಲ್ಲಿನಲ್ಲಿ ಹಾಕಿ ಚೆನ್ನಾಗಿ ಕಡೆದು ಅದೆಲ್ಲಾ ಒಂದು ಪೇಸ್ಟ್ ಆಗುವಂತೆ ಮಾಡುತ್ತಿದ್ದರು. ಅವರು ಈ ಕಾರ್ಯದಲ್ಲಿ ತೊಡಗಿದ್ದಾಗ ಅಲ್ಲಿ ಹೆಂಗಸರು ಸುಳಿವಂತಿರಲಿಲ್ಲ; ಅವರ ಬಳೆಗಳ ಶಬ್ದವೂ ಕೇಳಿಸಬಾರದೆಂಬ ತಾಕೀತು ಮಾಡಿರುತ್ತಿದ್ದರು. ಎಲೆಗಳೆಲ್ಲಾ ಪುಡಿಯಾಗಿ ಪೇಸ್ಟ್ ಆಗುವ ಹೊತ್ತಿಗೆ ಅದರ ಜೊತೆ 4-6 ಕೋಳಿ ಮೊಟ್ಟೆಗಳು ಮತ್ತು ಹದಕ್ಕೆ ಸರಿಯಾಗಿ ಹಸುವಿನ ತುಪ್ಪ

ವನ್ನು ಸೇರಿಸಿ ಅದರ ಜೊತೆ ಬೆರೆತು ಹೋಗುವಂತೆ ಮಾಡುತ್ತಿದ್ದರು. ನಂತರ ಸಲೀಸಾಗಿ ನುಂಗಲು ಸಾಧ್ಯವಾಗುವ ಗಾತ್ರದ ಹಲವಾರು ಉಂಡೆಗಳನ್ನು ಮಾಡಿ ರೋಗಿಗೆ ಕೊಡುತ್ತಿದ್ದರು.

ಕೆಲಸಾರಿ ರೋಗಿ ಮನೆಗೆ ಬರಲಾಗದಿದ್ದರೆ ಅವರನ್ನೇ ಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ಮುರಿದ ತುದಿಗಳು ಸೇರುವಂತೆ ಮಾಡಿ ಪಟ್ಟಿ ಹಾಕಿ ಬಿಗಿದು ಕಟ್ಟುತ್ತಿದ್ದರು. ಈ ಕಲೆಯಲ್ಲಿ ಅವರು ತುಂಬಾ ಅನುಭವ ಗಳಿಸಿದ್ದರು. ಮುಂದೆ ನಾನು ವೈದ್ಯನಾಗುವನಾಗಿದ್ದಾಗ ಅವರಿಗೆ ಮೂಳೆಗಳ ಸಂದುಗಳ ಬಗೆಗೆ ಪರಿಚಯ ಹೇಗಾಗುತ್ತದೆಂದು ವಿಚಾರಿಸುತ್ತಿದ್ದೆ. ಹಳ್ಳಿ ಕಡೆ ಸತ್ತು ಹೋದ ಜಾನುವಾರುಗಳನ್ನು ಗುಡ್ಡಬೆಟ್ಟಗಳಲ್ಲಿ ನಾಯಿ, ನರಿ, ಹದ್ದುಗಳನ್ನು ತಿನ್ನುವಂತೆ ಬಿಸಾಡುತ್ತಾರೆ. ಸ್ವಲ್ಪ ಕಾಲಾನಂತರ ಅವುಗಳ ಮೂಳೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಆ ಪ್ರದೇಶಗಳಲ್ಲಿ ಹರಡಿ ಬಿದ್ದಿರುತ್ತವೆ. ಅವರು ಆ ಕಡೆ ಹೋದಾಗ ಆ ಮೂಳೆಗಳ ಬಗೆಗೆ ವಿಶೇಷ ಗಮನ ಕೊಡುತ್ತಿದ್ದರಂತೆ ಮತ್ತು ಅವುಗಳನ್ನು ಮನುಷ್ಯ ಮೂಳೆ ಮತ್ತು ಕೀಲುಗಳಿಗೆ ಹೋಲಿಸಿ ಅಂದಾಜಿನಿಂದ ಈ ಕೆಲಸ ಮಾಡುತ್ತೇನೆನ್ನುತ್ತಿದ್ದರು.

ಚಿಕ್ಕಪ್ಪನವರು ಇಷ್ಟೆಲ್ಲಾ ಶ್ರಮ ತೆಗೆದುಕೊಂಡು ಕಾರ್ಯನಿರ್ವಹಿಸುತ್ತಿದ್ದರೂ, ಯಾರ ಹತ್ತಿರವೂ ಅದಕ್ಕೆ ಶುಲ್ಕ ತೆಗೆದುಕೊಳ್ಳುತ್ತಿರಲಿಲ್ಲ. ಅದೊಂದು ಪುಣ್ಯದ ಕೆಲಸವೆಂತಲೂ, ಅದಕ್ಕೆಲ್ಲಾ ಶುಲ್ಕ ತೆಗೆದುಕೊಂಡರೆ ದೇವರು ಮೆಚ್ಚನೆಂದು ಉದ್ಗಾರವೆತ್ತುತ್ತಿದ್ದರು. ಹೆಚ್ಚೆಂದರೆ ಅವರನ್ನಾರಾದರೂ ಬೇರೆ ಊರಿಗೆ ಕರೆದುಕೊಂಡು ಹೋದಾಗ ಔತಣ ಮಾಡಿ ಉಪಚರಿಸುತ್ತಿದ್ದರು. ಹಾಗೆ ನೋಡಿದರೆ ಅವರು ಮದ್ಯಪಾನ ಸಹಾ ಮಾಡುತ್ತಿದ್ದವರಲ್ಲ.

ಸರ್ಕಾರಿ ಕೆಲಸದಿಂದ ನಿವೃತ್ತನಾಗಿ ಶಿವಮೊಗ್ಗದಲ್ಲಿ ಖಾಸಗಿ ವೈದ್ಯ ವೃತ್ತಿ ನಿರತನಾಗಿದ್ದಾಗ ಕಾಲೇಜು ಉಪನ್ಯಾಸಕರೊಬ್ಬರು ಎಳೆಯ ಹುಡುಗನಾಗಿದ್ದಾಗ ನನ್ನ ಚಿಕ್ಕಪ್ಪನಿಂದಾದ ಉಪಕಾರವನ್ನು ನೆನೆಸಿ ಮಾತಾಡಿದರು. ಅವರು ನಮ್ಮ ಪ್ರದೇಶದ ಯಾವುದೋ ಊರಿನವರು. ವಿದ್ಯಾವಂತರಾಗಿ ಹಾಸನದ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ನನ್ನ ವಿಷಯವನ್ನು ತಿಳಿದಿದ್ದು ಯಾವುದೋ ಕಾಯಿಲೆಯ ಚಿಕಿತ್ಸೆಗಾಗಿ ನನ್ನ ಹತ್ತಿರ ಬಂದಿದ್ದರು. ಅದೆಲ್ಲಾ ಮುಗಿದ ಮೇಲೆ ಅವರ ಎಡಗೈಯನ್ನೆ ನನ್ನ ಮುಂದೆ ಚಾಚಿದರು. ಅದರಲ್ಲಿ ಏನಾದರೂ ಊನ ಇರಬಹುದೇ ನೋಡಿ ಎಂದರು. ಅದರಲ್ಲಿ ಅಂತಹದೇನೂ ಇಲ್ಲವೆಂದೆ. "ನೋಡಿ ಈಗ್ಗೆ 35 ವರ್ಷದ ಹಿಂದೆ ಮುರಿದು ಸೊಟ್ಟಗಾಗಿದ್ದ ಈ ಕೈಯನ್ನು ಸರಿಪಡಿಸಿದವರೇ ನಿಮ್ಮ ಚಿಕ್ಕಪ್ಪ" ಎಂದರು. ಅಲ್ಲದೆ ಬಾಲಕನಾಗಿದ್ದ ಅವರನ್ನು ದೂರದಿಂದ ಹಲವು ಗದ್ದೆ ಕೋಗಿನಲ್ಲಿ ನಡೆಸಿಕೊಂಡು ಬಂದಿದ್ದು ಹಾಗೂ ನಮ್ಮ ಮನೆಯ ಪರಿಚಯವನ್ನೆಲ್ಲಾ ವಿವರಿಸಿದಾಗ ನನ್ನ ಕಣ್ಣಂಚಿನಲ್ಲಿ ಆನಂದಭಾಷ್ಪ

ಉಂಟಾಗದಿರಲಿಲ್ಲ. ನಮ್ಮ ಮನೆತನದವರು ಆ ಕಾಲದಲ್ಲಿ ಅದೆಷ್ಟು ಪರೋಪಕಾರಿಗಳಾಗಿದ್ದ ರೆಂಬುದಕ್ಕೆ ಮನಸ್ಸಿನಲ್ಲೇ ಹೆಮ್ಮೆಪಟ್ಟೆ.

ಚಿಕ್ಕಪ್ಪ ನೀಡುತ್ತಿದ್ದ ಔಷಧಿಯಲ್ಲಿ ಮೂಳೆಗಳು ಕೂಡುವುದಕ್ಕೆ ಅದಾವ ಸತ್ವಗಳಿದ್ದವೆಂಬುದನ್ನು ನಾನು ಗ್ರಹಿಸಲಾರೆ. ಅವರಂತೂ ಸಾವಿರಾರು ಜನರಿಗೆ ಆ ದಿಸೆ ಯಲ್ಲಿ ಉಪಕಾರ ಮಾಡಿದ್ದಾರೆ. ಅವರು ಗತಿಸುವ ಹೊತ್ತಿಗೆ ಊರು ಮುಳುಗಡೆಯಾಗುವ ಹಂತದಲ್ಲಿತ್ತು. ಅದರೊಂದಿಗೆ ಆ ಪದ್ಧತಿಗೂ ಇತಿಶ್ರೀ ಹಾಡಿತೆನ್ನಬಹುದು. ಅವರ ಮಗ ಮತ್ತು ಇನ್ನು ಕೆಲವು ಯುವಕರು ಆ ಸೊಪ್ಪಿನ ಪರಿಚಯ ಮಾಡಿಕೊಂಡು ಅವರು ಗತಿಸಿದ ನಂತರವೂ ಕೆಲವರ ಮೂಳೆ ಮುರಿದ ಪ್ರಕರಣಗಳಿಗೆ ಮದ್ದು ಮಾಡಿಕೊಡುತ್ತಿದ್ದರಂತೆ. ಆದರೆ ಅದೆಷ್ಟು ಪರಿಣಾಮಕಾರಿಯಾಗುತ್ತಿತ್ತೋ ಹೇಳಲಾರೆ. ಆದರೆ ಇವತ್ತಿಗೂ ಮೂಳೆ ಮುರಿತಕ್ಕೆ ಸರ್ಕಾರಿ ಆಸ್ಪತ್ರೆಗಳಲ್ಲಿ ಎಕ್ಸ್‌ರೇ ತೆಗೆಸಿ, ಮೂಳೆ ತಜ್ಞ ವೈದ್ಯರಿಂದ ಚಿಕಿತ್ಸೆ ಮಾಡಿಸಿಕೊಂಡು ಬಂದ ಕೆಲವರು "ಹೊಳೆಗದ್ದೆಯವರ ಮದ್ದನ್ನು" ಬಳಸಲು ಇಷ್ಟಪಟ್ಟು ಬರುತ್ತಿರುವುದನ್ನು ಅಪರೂಪಕ್ಕಾದರೂ ನೋಡಬಹುದಾಗಿತ್ತು. ಮುಳುಗಡೆಯ ಪರಿಣಾಮ ದಿಂದಾಗಿ ನಮ್ಮವರೆಲ್ಲಾ ಬೇರೆ ಬೇರೆ ಕಡೆ ನೆಲೆಸುವಂತಾಗಿದೆ. ನಮ್ಮೂರಿನ ಇತರ ವಿಶೇಷತೆಗಳಾದ ಸತ್ಯೇಳು ದೇವಪ್ಪ ಹೆಗ್ಗಡೆ, ಗಣಮಗ ಬಚ್ಚನ ದೇವರು ಮುಂತಾದವುಗಳಿ ಗಾದ ಗತಿಯೇ ನಮ್ಮವರು ನೀಡುತ್ತಿದ್ದ ಮದ್ದಿಗೂ ಆಗಿರುವುದರಲ್ಲಿ ಅಚ್ಚರಿಯೇನೂ ಇಲ್ಲ.

ನಮ್ಮ ಮನೆಯವರು ಪರೋಪಕಾರಿಗಳಾಗಿದ್ದರೆಂಬುದಕ್ಕೆ ನನ್ನ ಇನ್ನೊಬ್ಬ ಚಿಕ್ಕಪ್ಪ ಸ|| ಶಿದ್ದಪ್ಪಗೌಡರು ಜರುಗಿಸುತ್ತಿದ್ದ ಕಾರ್ಯಗಳನ್ನು ಉಲ್ಲೇಖಿಸಬಯಸುತ್ತೇನೆ. ಆ ಕಾಲದಲ್ಲಿ ರೈತಾಪಿ ಜನರು ಬಳಸುತ್ತಿದ್ದ ಸಣ್ಣಪುಟ್ಟ ಮಿಷನರಿಗಳನ್ನು ರಿಪೇರಿ ಮಾಡುವುದರಲ್ಲಿ ಎತ್ತಿದ ಕೈ ಅವರದಾಗಿತ್ತು. ನಮ್ಮಲ್ಲಿ ಬಹಳ ಕಾಲದಿಂದ ಚಾಲ್ತಿ ಇದ್ದ ಯಂತ್ರ ಸಾಮಗ್ರಿಯೆಂದರೆ ಅಡಿಕೆ ಮರಗಳಿಗೆ ಬೋರ್ಡ್ ಮಿಕ್ಸರ್‌ಗೆ ಬಳಸುವ ಔಷಧಿ ಸಿಂಪಡಿಸುತ್ತಿದ್ದ ಮಿಷನ್. ಅದರಲ್ಲಿ ಹಲವು ಭಾಗಗಳಿದ್ದು, ಸ್ವಲ್ಪ ಹೆಚ್ಚುಕಡಿಮೆಯಾದರೆ ತೀರ್ಥಹಳ್ಳಿಗೇ ಕೊಂಡು ಹೋಗಿ ರಿಪೇರಿ ಮಾಡಿಸಬೇಕಿತ್ತು. ಸುರಿಯುತ್ತಿರುವ ಮಳೆ, ಕೊಳೆ ರೋಗದಿಂದ ಉದುರುತ್ತಿರುವ ಅಡಿಕೆ, ರೈತರ ಗೋಳು ಆ ಸಮಯದಲ್ಲಿ ಹೇಳಲಾಗದು. ಆ ಯಂತ್ರ ಕಾರ್ಯನಿರ್ವಹಿಸುವ ರೀತಿ ನೀತಿಗಳನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ಅದರ ಕೆಲವು ತೊಡಕುಗಳನ್ನು ನಿವಾರಿಸುತ್ತಿದ್ದರು. ಅದರಲ್ಲೂ ಔಷಧಿ ಸಿಂಪಡಿಸುವ ಪ್ರಮಾಣವನ್ನು ನಿಯಂತ್ರಿಸುವ ಸ್ಟಾಪರ್ ಅಥವಾ ಬಿರಡೆ (Stopper) (ಹಳ್ಳಿಯವರ ಮಾತಿನಲ್ಲಿ ಅದಕ್ಕೆ "ಪಿರ್ಕಿ") ರಿಪೇರಿ ಮಾಡಿಕೊಡುತ್ತಿದ್ದರು. ಹಿತ್ತಾಳೆಯಿಂದ ತಯಾರಿಸಿದ ಸ್ಟಾಪರ್ ಸತತವಾಗಿ ಕೆಲಕಾಲ ಉಪಯೋಗಿಸಿದಾಗ ಸವೆದುಬಿಡುತ್ತಿತ್ತು. ಔಷಧಿ ಅದರ ಪಕ್ಕಗಳಲ್ಲಿ ಸುರಿದುಹೋಗುತ್ತಿತ್ತು. ಅದಕ್ಕೆ ಸ|| ಸಿದ್ದಪ್ಪಗೌಡರು ಗಟ್ಟಿಯಾದ

ಮರ (ಹುಲುಚೊಪ್ಪಿನ ಮರ)ವೊಂದರ ಕಾಂಡದಿಂದ ಅಂತಹದೊಂದನ್ನು ತಯಾರಿಸುತ್ತಿದ್ದರು. ಬರೇ ಕೈಯ ಕರಕುಶಲತೆಯಿಂದಲೇ ಅದನ್ನು ಹಿತ್ತಾಳೆಯ ಸ್ಪಾಪರ್‌ನ ಆಕಾರ ಮತ್ತು ಗಾತ್ರಕ್ಕೆ ತಂದುಬಿಡುತ್ತಿದ್ದರು. ಪ್ರತಿದಿನ ಅಕ್ಕಪಕ್ಕದ ಒಂದೆರಡು ರೈತರು ಅವರ ಹತ್ತಿರ ಬಂದು ಅಂತಹವುಗಳನ್ನೆ ತಯಾರು ಮಾಡಿಕೊಳ್ಳುವುದಕ್ಕೆ ಬರುತ್ತಿದ್ದುದನ್ನು ನೋಡಬಹುದಾಗಿತ್ತು. ಯಾವುದೇ ಬೇಸರವಿಲ್ಲದೆ ಹಾಗೂ ಶುಲ್ಕವನ್ನೂ ಸಹಾ ತೆಗೆದುಕೊಳ್ಳದೆ ಆ ಕೆಲಸವನ್ನು ತಲ್ಲೀನತೆಯಿಂದ ಮಾಡಿಕೊಡುತ್ತಿದ್ದರು. ಈಗಿನ ಕಾಲದವರಾಗಿದ್ದರೆ, ಅದೇ ಅವರಿಗೊಂದು ಸಂಪಾದನೆಯ ದಾರಿಯಾಗುತ್ತಿದ್ದುದರಲ್ಲಿ ಸಂದೇಹವಿಲ್ಲ.

# ಎಲೆ ಅಡಿಕೆ ಪ್ರಸಂಗ

ನಮ್ಮೂರಿನ ನೆನಪಿನ ಸುರುಳಿಯನ್ನು ಬಿಚ್ಚಿದಾಗ ನಾನು ಅತೀ ಚಿಕ್ಕವನಾಗಿದ್ದಾಗ ನಡೆದ ನನ್ನ ಜೀವಕ್ಕೆ ಅಪಾಯ ಒದಗಿದ ಪ್ರಸಂಗವೊಂದನ್ನು ಜ್ಞಾಪಿಸಿಕೊಳ್ಳುವುದು ಉಚಿತ. ಅದೆಂದರೆ ನನ್ನ ತಾಯಿ - ನನ್ನವ್ವ ಎಂದಿನಿಂದ ನನಗೆ ಜ್ಞಾಪಕದಲ್ಲಿದ್ದಾಳೆಂಬುದನ್ನು ಹೇಳುವುದು ಕಷ್ಟ. ವರ್ಷ ತುಂಬುವುದರೊಳಗೆ ತಂದೆಯನ್ನು ಕಳೆದುಕೊಂಡ ತಬ್ಬಲಿಗೆ ತಾಯಿಯೇ ಸರ್ವಸ್ವವಾಗಿರುವುದು ಸ್ವಾಭಾವಿಕವೆ ತಾನೆ. ಪತಿಯನ್ನು ಕಳೆದುಕೊಂಡ ನನ್ನವ್ವನಿಗೆ ಉಳಿದಿದ್ದ ಭವಿಷ್ಯವೆಂದರೆ ನನ್ನ ಮುಂದಿನ ಆಗುಹೋಗು ಮಾತ್ರವಷ್ಟೆ. ಈ ಸನ್ನಿವೇಶದಲ್ಲಿ ಅವ್ವನನ್ನು ಬಿಟ್ಟಿರಲು ನನಗಾಗುತ್ತಿರಲಿಲ್ಲ ; ನನ್ನನ್ನು ಬಿಟ್ಟು ಅವ್ವ ಇರಲಾರಳು. ನನ್ನವ್ವನ ದುಃಖ ದುಮ್ಮಾನಗಳನ್ನು ಅರ್ಥೈಸಿಕೊಳ್ಳುವ ವಯಸ್ಸು ನನ್ನದಾಗಿರಲಿಲ್ಲ. ಗಂಡನನ್ನು ಕಳೆದುಕೊಂಡ ಕಷ್ಟ ಕಾಲದಲ್ಲೂ ಮನೆಯ ಸರದಿಯ ಕೆಲಸ ಕಾರ್ಯಗಳಲ್ಲಿ ಇತರ ಹೆಂಗಸರಂತೆ ಭಾಗವಹಿಸುವುದು ಅನಿವಾರ್ಯವೇ ಆಗಿತ್ತು ಆಕೆಗೆ. ಮಕ್ಕಳೇ ಇಲ್ಲದಂತಾಗಿದ್ದರೆ, ಬಹುಶಃ ತವರುಮನೆ ಸೇರಬಹುದಾಗಿತ್ತೇನೋ. ಆದರೆ ಆಕೆಯ ಅದೃಷ್ಟವೋ ಎಂಬಂತೆ ಉಳಿದುಕೊಂಡಿದ್ದ ಮಗನನ್ನು ಸಾಕಿ, ಸಲಹಿ ದೊಡ್ಡವನನ್ನಾಗಿ ಮಾಡುವ ಗುರುತರ ಜವಾಬುದಾರಿ ಅವ್ವನ ಕರ್ತವ್ಯವಾದಂತಿತ್ತು. ಅವಳಿಗೆ ಮನೆಯ ಎಷ್ಟೇ ಕೆಲಸ ಕಾರ್ಯಗಳಿದ್ದರೂ ನನ್ನೆಲ್ಲಾ ವೈಯಕ್ತಿಕ ಅವಶ್ಯಕತೆಗಳನ್ನು ಪೂರೈಸುವುದು ಅವಳೇ. ಪ್ರತಿದಿನ ಮುಖ ಶುಚಿ ಮಾಡಿ ಮೈ ತೊಳಸಿ ತಿಂಡಿ, ತೀರ್ಥ, ಅನ್ನಾಹಾರಗಳೆಲ್ಲಾ ಅವ್ವನಿಂದಲೇ ಜರುಗಬೇಕು. ಆ ಸಮಯ ನನ್ನನ್ನು ಅತ್ಯಂತ ಪ್ರೀತಿಯಿಂದ ಓಲೈಸುವ ಹಲವು ಚಿಕ್ಕಮ್ಮಂದಿರಿದ್ದು, ಅವರೆಲ್ಲಾ ನನ್ನ ಯೋಗಕ್ಷೇಮ ನೋಡಿಕೊಳ್ಳಲು ಮುಂದಾಗುತ್ತಿದ್ದರೂ, ನನಗೆ ಅವ್ವನೇ ಎಲ್ಲಾ ಮಾಡಬೇಕೆಂಬ ಹಠ. ಅವ್ವ ಕಲಸಿಕೊಟ್ಟ ಅನ್ನದ ಕೈತುತ್ತಿನ ಸವಿ ಬೇರೆ ಯಾರಿಂದಲೂ ಬರಲು ಸಾಧ್ಯವಿಲ್ಲವೆಂಬುದೇ ನನ್ನ ಭಾವನೆ. ಸುಮಾರು ನಾಲ್ಕೈದು ವರ್ಷಗಳಷ್ಟು ದೀರ್ಘಕಾಲ ಅವ್ವನ ಸ್ತನ್ಯಪಾನ ಮಾಡಿದ ಹೆಗ್ಗಳಿಕೆ ನನ್ನದಾಯಿತು ! ಪರ ಊರಿಗೆ ಅಕ್ಷರಾಭ್ಯಾಸಕ್ಕೆ ತೆರಳುವವರೆಗೂ ಅವ್ವನ ಪಕ್ಕದಲ್ಲೆ ಮಲಗುವ ಅಭ್ಯಾಸ. ದಿನವೆಲ್ಲಾ ಅವ್ವನ ಸೆರಗು ಹಿಡಿದುಕೊಂಡೇ ತಿರುಗಾಡುತ್ತಿದ್ದ ನೆನವಾಗುತ್ತಿದೆ. ಅಂದರೆ ನಾನು ಒಬ್ಬನೇ ಮಗನೆಂದು ಸಾಕಿದ ಹಠಮಾರಿ ಮಗುವಾಗಿ ರೂಪುಗೊಳ್ಳುತ್ತಿದ್ದೆನೆನ್ನಬಹುದು. ಮುಂದಿನ ವರ್ಷಗಳಲ್ಲಿ ಚಿಕ್ಕಪ್ಪಂದಿರ ಮಕ್ಕಳು ಅವ್ವ

ನಿಂದ ಲಾಲನೆ ಪಾಲನೆ ಮಾಡಿಸಿಕೊಳ್ಳುತ್ತಿದ್ದಾಗ ನಾನು ಸಿಡಿಮಿಡಗೊಳ್ಳುತ್ತಿದ್ದೆ. ಅವ್ವ ಯೆಂದರೆ ನನ್ನದೇ ಆಸ್ತಿ, ಆಕೆಯ ಮೇಲೆ ನನಗೆ ಮಾತ್ರ ಹಕ್ಕು ಎಂಬ ಭಾವನೆ ನನಗುಂಟಾಗಿರಬೇಕು.

ನಾನು ತೀರಾ ಚಿಕ್ಕವನಿದ್ದಾಗ ಅಂದರೆ ಬಹುಶಃ 3-4 ವರ್ಷದವನಿರುವಾಗ ಪ್ರಾಣಾಂತಿಕವಾಗಬಹುದಾದ ಘಟನೆ ನನಗೆ ಜ್ಞಾಪಕವಿರಬಹುದಾದ ಪ್ರಸಂಗ. ಮಳೆಗಾಲದ ಸಸಿನೆಟ್ಟಿಯ ಸಮಯ. ಮನೆಯವರೆಲ್ಲಾ ಬೆಳಗಿನಿಂದ ಸಂಜೆಯವರೆಗೆ ಗದ್ದೆಗಳಲ್ಲಿ ಕೆಲಸ ಮಾಡಿ ದಣಿದು ಬಂದಿದ್ದರು. ರಾತ್ರಿ ಸುಮಾರು 8-9 ಗಂಟೆಯಾಗಿರಬಹುದು. ಗಂಡಸರು ಮತ್ತು ಮಕ್ಕಳ ಊಟ ಮುಗಿದಿತ್ತು. ಹೆಂಗಸರು ಊಟಕ್ಕೆ ಕುಳಿತುಕೊಂಡಿದ್ದರು. ಸಂಜೆ, ಅವ್ವ ಗದ್ದೆಯಿಂದ ಬಂದಾಗಿನಿಂದಲೂ ಯಾವುದೋ ಕಾರಣಕ್ಕಾಗಿ ಆಕೆಯನ್ನು ಪೀಡಿಸುತ್ತಿದ್ದೆ. ಅವಳು ಊಟ ಮಾಡುವಾಗಲೂ ನನ್ನ ರೋಧನ ನಿಂತೇ ಇರಲಿಲ್ಲ; ಅವಳಿಗೂ ನನ್ನನ್ನು ಸಂತೈಸಿ, ಗದರಿಸಿ ಸಾಕು ಸಾಕಾಗಿತ್ತು. ಪಕ್ಕದ ಕಡಿಮಾಡಿನ ಕೋಣೆಯಲ್ಲಿ ಚಿಕ್ಕಪ್ಪ ಶಿದ್ದಪ್ಪಗೌಡರು ಎಲೆಅಡಿಕೆ ಹಾಕುತ್ತಾ ಯಾರ ಹತ್ತಿರವೊ ಮಾತನಾಡುತ್ತಾ ಕುಳಿತಿದ್ದರು. ನನ್ನ ಹಠವನ್ನು ನೋಡಿ ಸುಮ್ಮನಿರಿಸಲು ಎಲೆಅಡಿಕೆ ಕೊಡುತ್ತೇನೆ ಬಾ ಎಂದು ಕರೆದರು. ಮೊದಲೇ ಎಲೆಅಡಿಕೆ ರುಚಿ ಅನುಭವಿಸಿದ್ದ ನಾನು ಅವರಲ್ಲಿಗೆ ಹೋದೆ. ಅವರ ಹತ್ತಿರ ಇದ್ದ ಎಲೆ ಅಡಿಕೆಗಳನ್ನು ಕೈಗೆತ್ತಿಕೊಂಡೆ. ಮಕ್ಕಳು ಎಲೆಅಡಿಕೆ ಹಾಕಬಾರದೆಂದು ಬುದ್ಧಿ ಹೇಳಿದರು. ಹಿಂದೆ ಹಲವು ಸಾರಿ ಅವ್ವನ ಹತ್ತಿರ ಎಲೆಹಾಕಿದ ಅಭ್ಯಾಸವಿತ್ತು. ಅವ್ವ ಅಡಿಕೆಯನ್ನು ಬಾಯಿಯಿಂದ ಊದಿ ಅದರಲ್ಲಿ ಹುಳಹುಪ್ಪಟೆ ಇದ್ದರೆ ಹೋಗುವಂತೆ ಮಾಡುತ್ತಿದ್ದಳು ; ವೀಳ್ಯದೆಲೆಯನ್ನು ಚೆನ್ನಾಗಿ ಒರಸಿ ಶುಚಿ ಮಾಡುತ್ತಿದ್ದಳು ; ಹದವಾಗಿ ಸುಣ್ಣವನ್ನು ಹಚ್ಚಿಕೊಡುತ್ತಿದ್ದಳು ; ಇದು ಅವಳ ಇಷ್ಟದಿಂದಲ್ಲ. ನನ್ನ ಹಠವನ್ನು ತಡೆಯಲಾರದೇ ನಿರ್ವಾಹವಿಲ್ಲದೇ ಮಾಡಬೇಕಾಗುತ್ತಿತ್ತು. ಆದರೆ ಆ ದಿನ ಅದಾವುದೂ ಆಗಲಿಲ್ಲ ; ನಾನೇ ಎಲೆಅಡಿಕೆ ಸುಣ್ಣ ಬಳಿದು ಬಾಯಿಗೆ ಹಾಕಿ, ಚೆನ್ನಾಗಿ ಅಗಿದುಬಿಟ್ಟೆ. ಸ್ವಲ್ಪ ಸಮಯದಲ್ಲೆ ಸಂಕಟವಾದಂತಾಗಿ, ಹಾಗೇ ಪಕ್ಕಕ್ಕೆ ಒರಗಿ ಮಲಗಿದೆ. ನನಗೆ ನಿದ್ದೆ ಬಂದಿರಬಹುದೆಂದು ಚಿಕ್ಕಪ್ಪ ಭಾವಿಸಿರಬೇಕು. ನನಗೆ ನಿದ್ರೆ ಬಂದು ಮಲಗಿರುವುದಾಗಿ ಹೇಳಿ ಊಟದ ನಂತರ ಎತ್ತಿಕೊಂಡು ಹೋಗಿ ಮಲಗಿಸುವಂತೆ ಹೇಳಿದರು. ಊಟ ಮುಗಿದ ನಂತರ ಅವ್ವ ಬಂದು ನನ್ನನ್ನು ಎತ್ತಿಕೊಳ್ಳಲು ಪ್ರಯತ್ನಿಸಿದಳು. ಕೂಡಲೇ ನನ್ನ ಮೈಕೈಯೆಲ್ಲಾ ತಣ್ಣಗಾಗಿರುವುದು ಅವಳ ಅನುಭವಕ್ಕೆ ಬಂದಿರಬೇಕು. ಕಣ್ಣುಗಳು ಮೇಲೆ ತಿರುಗಿದ್ದು, ಮೂಗು ಬಾಯಿಗಳಲ್ಲಿ ನೊರೆ ಬರುತ್ತಿತ್ತಂತೆ. ಉಸಿರಾಟವೂ ತೀರಾ ಕ್ಷೀಣವಾಗಿತ್ತು. ಮುಖದ ಹತ್ತಿರ ಚಿಮಣಿ ದೀಪ ಹಿಡಿದು ನೋಡಿದವಳೇ ಚೀತ್ಕರಿಸಿ ಕೂಗಿದಳಂತೆ. ಏನಾಯಿತೆಂದು ತಿಳಿಯದೇ ಎಲ್ಲರೂ ನಾನಿದ್ದಲ್ಲಿಗೆ ಓಡಿ ಬಂದರಂತೆ. ಸ್ವಲ್ಪ ಉಸಿರಾಟವನ್ನು ಬಿಟ್ಟರೆ, ಜೀವವಿದ್ದ ಬೇರಾವ ಲಕ್ಷಣಗಳು ಇರಲಿಲ್ಲವಂತೆ. ಇನ್ನೇನು ನನ್ನ ಪ್ರಾಣವೇ ಹೋಗಲಿದೆಯೆಂದು ಎಲ್ಲರೂ ಕೂಗಿಕೊಂಡು

ರೋಧನ ಮಾಡಿದರಂತೆ. ಅಕ್ಕಪಕ್ಕದ ಮನೆಯವರೂ ಓಡೋಡಿ ಬಂದರು. ಮೈ ಬಿಸಿ ಮಾಡಲು ಒಲೆಯಿಂದ ಬಿಸಿ ಬಿಸಿ ಬೂದಿಯನ್ನು ತಂದು ತೀಡಿದರು. ನೀರು ಕುಡಿಸಲು ಪ್ರಯತ್ನ ಮಾಡಿದರೂ, ಅದು ಬಾಯೊಳಗೆ ಹೋಗಲಿಲ್ಲವಂತೆ. ಆಗೇನು, ಆ ಕುಗ್ರಾಮ ದಲ್ಲಿ ವೈದ್ಯರಾಗಲೀ ಆಸ್ಪತ್ರೆಯಾಗಲೀ ಎಲ್ಲಿಂದ ಬರಬೇಕು. ನಮ್ಮೂರಿನ ಅಮ್ಮನವರ ದೇವಸ್ಥಾನ, ಅದರ ಗಣಮಗ ಬಚ್ಚ ಮಾತ್ರ ಏನಾದರೂ ಸಹಾಯ ಮಾಡಬಲ್ಲವರು. ಅಂದು ಶನಿವಾರ. ಪದ್ಧತಿಯಂತೆ ದೇವಸ್ಥಾನದಲ್ಲಿ ಆ ದಿನ 'ಗಣ' ಬಂದಿದೆ. ಶಂಖ ಜಾಗಟೆಯ ಶಬ್ದಗಳು ಕೇಳಿಸುತ್ತಿವೆ. ಅದನ್ನೇ ನಂಬಿ ಸುರಿಯುತ್ತಿದ್ದ ಜಡಿ ಮಳೆಯನ್ನು ಲಕ್ಷಿಸದೇ ದೇವಸ್ಥಾನಕ್ಕೆ ಒಂದಿಬ್ಬರು ಓಡಿದರು. ಮನೆಯಲ್ಲಿದ್ದವರು ನಮ್ಮವರು ನಂಬಿದ್ದ ದೆವ್ವ, ಭೂತ, ಭ್ರರ್ಮಗಳಿಗೆ ಹರಕೆ ಹೊತ್ತರು. ನನ್ನ ದೇಹಕ್ಕೆ ತೆಂಗಿನ ಕಾಯಿ, ಕೋಳಿ ಮುಂತಾದವನ್ನು ಸುಳಿದರು. ಅಷ್ಟರಲ್ಲೇ ದೇವಸ್ಥಾನಕ್ಕೆ ಹೋದವರೂ ವಾಪಸು ಬಂದರು. ಹುಡುಗ ಆ ದಿನ ಅಲ್ಲಿ ಅಡ್ಡಾಡುತ್ತಿದ್ದ "ರಣದ ಸುಳಿ"ಗೆ ಸಿಕ್ಕಿದ್ದ ಪರಿಣಾಮದಿಂದಾಗಿ ಹಾಗಾಗಿದೆಯೆಂದು ಗಣ ಹೇಳಿತ್ತಂತೆ. ನಮ್ಮ ಹೊಸಮನೆಯಲ್ಲಿದ್ದ ಚಿಕ್ಕಳೂರಮ್ಮ ಎಂಬ ಅಜ್ಜಿಯೊಬ್ಬರು 10-12 ದಿನಗಳ ಹಿಂದೆ ತೀರಿಹೋಗಿದ್ದರು. ಅವರ 'ಜಕಣಿ'ಯನ್ನು ಕೊಂಡೊಯ್ಯಲು (ಕಾಯಿಲೆ ಹೋಗುವುದೆಂತಲೂ ಹೇಳುತ್ತಾರೆ) ರಣ ಆ ದಿನ ಯಾವುದೋ ಸಮಯದಲ್ಲಿ ಅಲ್ಲಿ ಬಂದು ಸುತ್ತಾಡುತ್ತದಂತೆ. ಮಕ್ಕಳನ್ನು ಆ ದಿನ ಹೊರಗೆ ಬಿಡಬೇಡಿ ಎಂದು ಗಣ ಹಿಂದಿನ ಶನಿವಾರವೇ ನಮ್ಮವರಿಗೆ ತಾಕೀತು ಮಾಡಿತ್ತಂತೆ. ಮನೆಯಲ್ಲಿ ದೊಡ್ಡವರಾರೂ ಇರದಿದ್ದುದರಿಂದ ಆ ದಿನವೆಲ್ಲಾ ಮನೆಯ ಹೊರಗಡೆ ಮಳೆಯಲ್ಲೇ ನಾವೆಲ್ಲ ಆಡುತ್ತಿದ್ದುದೂ ನಿಜವೆ. ಜರುಗಿದ ಕಂಟಕದ ಪರಿಹಾರಕ್ಕಾಗಿ ತೀರ್ಥ, ಭಸ್ಮ ಮುಂತಾದವನ್ನು ಕಳಿಸಿಕೊಟ್ಟಿತ್ತು. ಅದನ್ನು ಸಂಪೂರ್ಣವಾಗಿ ನಿವಾರಿಸಲು "ರಾವು ತೆಗೆಯುವ" ಕ್ರಮ ಜರುಗಿಸಲು ಒಂದು ವಾರದ ಗಡುವೂ ಸಹಾ ನೀಡಿತ್ತಂತೆ. ದೇವಸ್ಥಾನಕ್ಕೆ ಹೋದವರು ಬರುವಷ್ಟರ ಒಳಗೆ ನನಗೆ ಸ್ವಲ್ಪ "ದಾತು" (ಪ್ರಜ್ಞೆ) ಬಂದಂತಾಗಿತ್ತು. ವಾಂತಿಯೂ ಆಯಿತು. ಕಣ್ಣು ಬಿಟ್ಟು ನೋಡಿದನಂತೆ. ನನಗೂ ಎಚ್ಚರವಾಗಿ ಸ್ವಲ್ಪ ನಿರಾಳವಾಯಿತು.

ರೋಗ ನಿದಾನವನ್ನು ಗಣ ತನ್ನದೇ ಆದ ರೀತಿಯಲ್ಲಿ ಮಾಡಿತ್ತು. ಆದರೂ ಕೆಲ ವರು ಇತರ ಕಾರಣಗಳನ್ನೂ ಮುಂದೊಡ್ಡಿದರು. ಅಡಿಕೆಗಳಲ್ಲಿ ಕೆಲವು "ಸೊಕ್ಕಿ"ನವಿರುತ್ತ ವಂತೆ. ಅವುಗಳ ಒಳಗಡೆ ಕೆಲ ಸಾರಿ ಸಣ್ಣ ಹುಳಹುಪ್ಪಟೆ ಸೇರಿದ್ದರೂ ಹಾಗಾಗುತ್ತದೆಂದು ಕೆಲವರು ವ್ಯಾಖ್ಯಾನ ಮಾಡಿದರು. ಮತ್ತೆ ಕೆಲವರು ವೀಳ್ಯದೆಲೆಯ ತೊಟ್ಟಿನಲ್ಲಿ ಕಣ್ಣಿಗೆ ಗೋಚರವಾಗದ ಮಿಡಿನಾಗರ ಇದ್ದರೂ ಹೀಗಾಗುತ್ತದೆಂಬ ಅಭಿಪ್ರಾಯಪಟ್ಟರು! ಬಹುಶಃ ನಿಜಸ್ಥಿತಿಯನ್ನು ನಾವು ಈಗ ಪ್ರತಿಪಾದಿಸಬಹುದು. ಕೆಲವು ತೆರನ ವೀಳ್ಯದೆಲೆ ಅಥವಾ ಅಡಿಕೆಗಳನ್ನು ಬಳಸಿದಾಗ ನಮ್ಮ ಮುಖ, ಕಿವಿ, ಮೂಗುಗಳೆಲ್ಲ ಕೆಂಪಡರಿ, ಸಂಕಟ ವಾದಂತಾಗುವುದು ಬಹುಜನರ ಅನುಭವಕ್ಕೆ ಬಂದಿರುತ್ತದಲ್ಲವೆ. ನನಗೆ ಈಗಲೂ ಕೆಲ

ಸಾರಿ ಅಂಥ ಅನುಭವವಾಗುವುದುಂಟು. ತಕ್ಷಣ ನೀರು ಕುಡಿದರೆ ಸ್ವಲ್ಪ ಸಮಯದಲ್ಲೇ ಉಪಶಮನವಾಗುತ್ತದೆ. ಆ ದಿನ ನನಗೂ ಬಹುಶಃ ಹಾಗೇ ಆಗಿರಬೇಕು. ತೀರಾ ಎಳೆಯ ವಯಸ್ಸಿನವನಾಗಿದ್ದರಿಂದ ನನ್ನ ಪರಿಸ್ಥಿತಿ ಆ ದಿನ ವಿಕೋಪಕ್ಕೆ ಹೋಯಿತೆನಿಸುತ್ತದೆ. ನಾನೇನೋ ಎಚ್ಚರಗೊಂಡೆ. ಆ ದಿನದ ಪ್ರಸಂಗ ಅವ್ವ ಬಹಳ ಕಾಲ ದುಃಖ ದುಮ್ಮಾನಪಡುತ್ತಿದ್ದುದನ್ನು ಅನುಭವಿಸಿದ ಜ್ಞಾಪಕವಿದೆ. ಮುಂದೆ ಆಕೆ ಜೀವಿಸಿರುವವರೆಗೂ ನಾನು ಎಲೆ ಅಡಿಕೆ ಹಾಕುವ ಅಭಿಲಾಷೆ ವ್ಯಕ್ತಪಡಿಸಿದಾಗಲೆಲ್ಲಾ ಅವಳೇ ಎಲೆ ಅಡಿಕೆ ಸರಿಪಡಿಸಿಕೊಡುತ್ತಿದ್ದಳು. ಇಲ್ಲವೇ ಆ ಬಗೆಗೆ ಮತ್ತೆ ಮತ್ತೆ ಎಚ್ಚರಿಸುತ್ತಿದ್ದಳು.

## ರಾವು ಬಿಡಿಸುವುದು

ಮುಂದಿನ ವಾರ "ರಾವು ಬಿಡಿಸುವ" ಕಾರ್ಯಕ್ರಮ ನಿಯಮಬದ್ಧವಾಗಿ ಜರುಗಿತು. ಸಾಮಾನ್ಯವಾಗಿ ಅದು ರಾತ್ರಿ ಹೊತ್ತು ಜರುಗುವ ಕಾರ್ಯ. ಮನೆಯ ಅಂಗಳದಲ್ಲಿ ಒಂದು ಕಡೆ ಶುಭ್ರಗೊಳಿಸಿದ ಜಾಗದಲ್ಲಿ ಮಣೆಯೊಂದರ ಮೇಲೆ ಕಳಶವೊಂದನ್ನು ತಯಾರು ಮಾಡಿ ಇರಿಸುತ್ತಾರೆ. ಅಗಲವಾದ ಹರಿವಾಣದಂಥ ಪಾತ್ರೆಯಲ್ಲಿ ಬೇಯಿಸಿದ ಅನ್ನ ತುಂಬಿಟ್ಟು, ಅದರ ಮೇಲೆ ಕುಂಕುಮವನ್ನು ಹರಡಿ, ಕೆಂಪು ಬಣ್ಣ ಕಣ್ಣಿಗೆ ರಾಚುವಂತೆ ಮಾಡಿರುತ್ತಾರೆ. ಅದನ್ನು "ಚೆರು"ವೆಂತ ಕರೆಯುತ್ತಾರೆ. ಕಳಶ ಮತ್ತು ಚೆರುವಿರುವ ಪಾತ್ರೆಗೆ ಪೂಜೆ ಮಾಡುವ ಕಾರ್ಯ ಆರಂಭವಾಗುತ್ತದೆ. ದೀಪ, ಧೂಪ, ಆರತಿಗಳಾಗುತ್ತವೆ. ಅಷ್ಟರಲ್ಲೇ ನಮ್ಮೂರಿನ ಗಣಮಗ ಬಚ್ಚ ಮಿಂದು ಮಡಿಯಿಟ್ಟು ಆ ಸ್ಥಳಕ್ಕೆ ಆಗಮಿಸುತ್ತಾನೆ. ಕಳಶದ ಎದಿರು ನಿಂತು ಕೆಲ ಸಮಯ ಕೈಮುಗಿದುಕೊಂಡು ನಿಂತಿರುತ್ತಾನೆ. ಕೆಲವು ನಿಮಿಷಗಳ ನಂತರ ಹೂಂಕರಿಸುತ್ತಾ ಅಲುಗಾಡುತ್ತಾನೆ. ಆ ಸಮಯದಲ್ಲಿ ಶಂಖ, ಜಾಗಟೆಗಳ ನಿನಾದವೂ ಗಗನಕ್ಕೇರುತ್ತದೆ. ಅಷ್ಟರಲ್ಲಿ ಬಚ್ಚನ ಮೇಲೆ 'ಗಣ' ಬಂದಿರುತ್ತದೆ. ಮರದ ಕಡ್ಡಿಗಳಿಗೆ ಎಣ್ಣೆಯಲ್ಲಿ ಅದ್ದಿದ ಬಟ್ಟೆಯ ಸುತ್ತಿ ತಯಾರಿಸಿದ "ಕಕ್ಕಡ"ಗಳಿಗೆ ಬೆಂಕಿ ಹಚ್ಚಿ, ಕಳಸ, ಚೆರುವನ್ನು ಸುತ್ತುಬರಿಸಿ, ನಂತರ ನನಗೂ ಸುತ್ತು ಬರಿಸಿದನು. ನಂತರ ಒಂದು ದೊಡ್ಡ ಕೆಂಪು ಕೋಳಿ ಹುಂಜವನ್ನು ನನಗೆ ಮೂರು ಸಾರಿ ಸುತ್ತು ಬರಿಸಿ ಪಕ್ಕದಲ್ಲಿದ್ದವರೊಬ್ಬರಿಗೆ ಕೊಡಲಾಯಿತು. ಅವರು ಇನ್ನೂ ಒಬ್ಬರ ಸಹಾಯದಿಂದ ಅದರ ಕೊರಳನ್ನು ಕತ್ತರಿಸಿ ಕೆಳಗೆಸೆಯುತ್ತಾರೆ. ಅದರಿಂದ ಹರಿದ ಒಂದು ತೊಟ್ಟು ರಕ್ತವನ್ನು ಗಣ ನನ್ನ ಹಣೆಗೂ ಹಚ್ಚಿತು. ಮುಂದಿನ ವರ್ಷ ರಾವು ಬಿಡಿಸುವುದಕ್ಕಾಗಿ ಮತ್ತೊಂದು ಎಳೆ ಕೋಳಿ ಹುಂಜವನ್ನು ನನಗೆ ಸುತ್ತು ಬರಿಸಿ ಬಿಟ್ಟುಬಿಡುತ್ತಾರೆ. ಗಣ ಮತ್ತೆ ಹೂಂಕರಿಸಿ ಬಚ್ಚನ ಮೈ ಬಿಡುತ್ತದೆ. ಮೊದಲೇ ಕತ್ತರಿಸಿದ ಕೋಳಿ ಹುಂಜವನ್ನು ಹಸಿಗೆ ಮಾಡಿ ಆ ದಿನ ರಾತ್ರಿಯೇ ನೆರೆದಿದ್ದವರಿಗೆಲ್ಲಾ ಔತಣವೂ ಆಗುತ್ತದೆ !

ಮುಂದೆ ಪ್ರತಿ ಬೇಸಗೆ ರಜೆಯಲ್ಲಿ ನನಗೆ ರಾವು ಬಿಡಿಸುವ ಕಾರ್ಯ ನಡೆಯುತ್ತಿತ್ತು. ಬಹುಶಃ ನಾನು ತೀರ್ಥಹಳ್ಳಿಗೆ ಹೋಗಿ ಹೈಸ್ಕೂಲು ವಿದ್ಯಾರ್ಥಿಯಾದ ನಂತರ ಅದು

ಸ್ಥಗಿತವಾಗಿರಬಹುದೆಂದು ಕಾಣುತ್ತದೆ. ನನ್ನ ಜೀವದ ಬಗೆಗೆ ಅವ್ವನಿಗಿದ್ದ ಕಾಳಜಿಯ ಪ್ರತೀಕ ಅದಾಗಿತ್ತು.

## ಮಂತ್ರ, ತಂತ್ರ, ಗಣ ಬರುವುದು ಇತ್ಯಾದಿ -

ಮನುಷ್ಯರ ಮೈಮೇಲೆ "ಗಣ ಬರುವ" ಪದ್ಧತಿ ದೇಶದ ಬೇರೆ ಬೇರೆ ಪ್ರದೇಶಗಳಲ್ಲಿರಬಹುದು. ಆದರೆ ಈಗ್ಗೆ ಅರ್ಧ-ಮುಕ್ಕಾಲು ಶತಮಾನದ ಹಿಂದೆ ಜನರಲ್ಲಿನ್ನೂ ಅಷ್ಟಾಗಿ ವೈಚಾರಿಕ ಮನೋಭಾವವಿರದಿದ್ದ ಕಾಲದಲ್ಲಿ ಮಲೆನಾಡನಲ್ಲಿ ಮೈಮೇಲೆ ಗಣ ಬರುವುದೇ ಅಲ್ಲದೆ, "ಜಕ್ಕಣಿ ಬರುವುದು" ಮುಂತಾದ ಸಂಗತಿಗಳು ವ್ಯಾಪಕವಾಗಿ ಜರುಗುತ್ತಿದ್ದವು. ಕಾಯಿಲೆ-ಕಸಾಲೆಗಳಿಗೆ ವೈದ್ಯಕೀಯ ನೆರವಿಗಿಂತ ಮಂತ್ರವಾದಿಗಳು, ಗಣ ಬರುವವರು, ನಿಮಿತ್ತ ನೋಡುವವರು, ಅಂತ್ರ-ಚೀಟು ಬರೆವವರು ಮುಂತಾದವರ ಮೊರೆ ಹೋಗುವವರೇ ಹೆಚ್ಚು ಮಂದಿ. ನಮ್ಮ ಪುಟ್ಟ ಊರಿನಲ್ಲೇ ಅಂತಹವರು ಮೂರು ಜನ ಇದ್ದರು.

ಅವರಲ್ಲಿ ಹರಿಜನ ಪಂಗಡಕ್ಕೆ ಸೇರಿದ್ದ ಹೊಲೇರ ತಿಮ್ಮ ಎಂಬುವನು ಸಹಾ ತನ್ನ ಕೈಚಳಕ ತೋರಿಸುತ್ತಿದ್ದನೆಂದರೆ ಅಚ್ಚರಿಯಾಗಬಹುದು. ಕೆಲವರ ಮನೆಗಳಿಗೇ ಬಂದು ನಿಮಿತ್ತ ನೋಡಿ ಹಳ್ಳಿಯ ಕ್ಷುದ್ರ ದೇವತೆಗಳಿಂದ ಆಗಿರಬಹುದಾದ ತೊಂದರೆಗಳಿಗೆ ಅಂತ್ರ ಚೀಟು ಬರೆದುಕೊಡುತ್ತಿದ್ದ ; ಜನ ಜಾನುವಾರುಗಳಿಗೆ ದೈಹಿಕ ತೊಂದರೆಗಳಿದ್ದಾಗ ಉಪ್ಪು ಮಂತ್ರಿಸಿಕೊಡುವುದು, ಇಲ್ಲವೇ ಅವನು ಕೊಡುವ ಭಸ್ಮ ನೆಕ್ಕುವುದು ಸೇರಿರುತ್ತಿದ್ದವು. ಎಲ್ಲಕ್ಕಿಂತ ಮಿಗಿಲಾಗಿ "ಬಾರೀ ಜ್ವರ" (ಮಲೇರಿಯಾ) ಬರುವವರಿಗೆ ಯಾವುದೋ ಒಂದು ಜಾತಿಯ ಕಾಡಿನ ಬಳ್ಳಿಯೊಂದನ್ನು ತಂದು ಅವರ ತೋಳಿಗೆ ಕಟ್ಟುತ್ತಿದ್ದ. ಅದನ್ನು ಕಟ್ಟಿದ ಕಡೆ ಸುತ್ತಲೂ ಸುಟ್ಟ ಬೊಕ್ಕೆಗಳೇಳುತ್ತಿದ್ದವು. ಹಾಗಾದರೆ ಅದು ಬಾರಿ ಜ್ವರವೆಂತಲೂ, ಅದಕ್ಕಾಗಿ ಅವನು ಪ್ರತ್ಯೇಕ ನೀಡುತ್ತಿದ್ದ ಬೇರನ್ನು ಜೇನುತುಪ್ಪದಲ್ಲೋ, ಸಾರಾಯಿಯಲ್ಲೋ ತೇಯ್ದು ನೆಕ್ಕಿದರೆ ಬಹುಪಾಲು ಜನರಿಗೆ ಜ್ವರ ಬಿಡುತ್ತಿತ್ತು ! ನನಗೂ ಒಂದೆರಡು ಸಾರಿ ಅದರ ಪ್ರಯೋಗವಾದದ್ದು ಜ್ಞಾಪಕವಿದೆ. ಮುಂದೆ ನಾನು ಪೇಟೆ ಪಟ್ಟಣಗಳಲ್ಲಿ ಓದುತ್ತಿದ್ದು ಅಪರೂಪಕ್ಕೆ ಊರಿಗೆ ಬಂದಾಗ ನನ್ನನ್ನು ನೋಡಲು ತಪ್ಪದೇ ಬರುತ್ತಿದ್ದ. ನನ್ನ ಯೋಗಕ್ಷೇಮ ಕೇಳಿಕೊಂಡು, ಅವ್ವ ಕೊಡುತ್ತಿದ್ದ ಎಲೆ-ಅಡಿಕೆ ಹಾಕಿಕೊಂಡು ಹೋಗುತ್ತಿದ್ದ. ನಾನು ನೋಡುವಾಗಲೇ ಹಣ್ಣು ಹಣ್ಣು ಮುದುಕನಾಗಿದ್ದ ತಿಮ್ಮ ಕೆಲ ಕಾಲಾನಂತರ ಸದ್ದುಗದ್ದಲವಿಲ್ಲದೆ ತೀರಿಕೊಂಡ.

ಈ ಸಾಲಿಗೆ ಸೇರುವ ಮತ್ತೊಬ್ಬ ಮಂತ್ರವಾದಿಯೆಂದರೆ ಬೊಮ್ಮಣ್ಣ ಎನ್ನುವ ಒಕ್ಕಲಿಗರವನೇ. ಅವನ ಕಾರ್ಯ ವಿಧಾನವೂ ತಿಮ್ಮನ ರೀತಿಯದ್ದೇ ಆಗಿರುತಿದ್ದಿತು. ಅವರಿಬ್ಬರ ನಡುವೆ ಪೈಪೋಟಿ ಇದೆ ಎಂದು ಜನ ಹೇಳುತ್ತಿದ್ದರು. ಅಲ್ಲದೆ ಅವರಿಬ್ಬರೂ ತಮಗಾಗದವರ ಮೇಲೆ ಮಾಟ ಮಂತ್ರ ಮಾಡಿ ತೊಂದರೆ ಕೊಡುತ್ತಾರೆಂಬ ಪ್ರತೀತಿಯಿತ್ತು.

ಅವರಲ್ಲಾರಾದರೂ ಒಂದೆರೆಡು ದಿನಗಳ ಹಿಂದೆ ಯಾರಾದ್ರಾದರೂ ಮನೆಯ ಹತ್ತಿರ ಸುಳಿದಾಡಿದ್ದು, ಕಾಕತಾಳೀಯವೋ ಎಂಬಂತೆ ಜಾನುವಾರುಗಳಿಗೆ ಅಸ್ವಸ್ಥವಾದಂತಾದರೆ ಅವರೇ ಏನೋ ಕಿತಾಪತಿ ಮಾಡಿರಬೇಕೆಂದು (ಮಾಟ-ಮಂತ್ರ) ಗೂಬೆ ಕೂರಿಸುತ್ತಿದ್ದರು. ಮನೆಯವರಾದಾರೂ ಅವರಲ್ಲಿಗೆ ಹೋಗಿ ನಿಮಿತ್ತ ನೋಡಿಸಿ ಮಂತ್ರಿಸಿದ ಉಪ್ಪೋ, ಭಸ್ಮವನ್ನೋ ತಂದು ಹಾಕುವುದು ವಾಡಿಕೆಯಾಗಿತ್ತು. ಆ ಕಾರ್ಯಕ್ಕೆ ಅವರಿಗೆ ತಕ್ಕ ಕಾಣಿಕೆ ಸಲ್ಲಿಸಬೇಕಾಗಿತ್ತು.

ಬೊಮ್ಮಣ್ಣ ನಮಗೆಲ್ಲಾ ಮೊದಲು ಪರಿಚಿತನಾಗದ್ದೊ ಅದೇ ತಾನೇ ಬೆಳಕಿಗೆ ಬಂದಿದ್ದ "ಫೋನೋಗ್ರಾಫ್" (ಗ್ರಾಮಾ ಫೋನ್) ತಂದು ನಮ್ಮ ಮನೆಗಳಲ್ಲಿ ಅದರಿಂದ ಮನುಷ್ಯರು ಹಾಡುವಂತೆಯೇ ಹಾಡು ಕೇಳಿಸಿದ್ದರಿಂದ; ನಾವೆಲ್ಲಾ ಆಗಿನ್ನೂ 4-5 ವರ್ಷದ ಮಕ್ಕಳು. ಬೊಮ್ಮಣ್ಣ ತಟ್ಟೆಯಾಕಾರದ ದುಂಡಾದ ಕಪ್ಪು ತೆಳು ಹಲಗೆಯನ್ನು ಯಂತ್ರದ ಮೇಲೆ ಇಟ್ಟು ಕೀ ತಿರುಗಿಸಿದನೆಂದರೆ "ನಾನೊಂದು ಮದುವೆ ಮಾಡಿಕೊಂಬೆ ; ಅದರಾನಂದ ಹೇಳಿಕೊಂಬೆ..." ಮುಂತಾದ ಹಾಡುಗಳು ಪುಂಖಾನುಪುಂಖವಾಗಿ ಕೇಳಿಬರುತ್ತಿದ್ದುವು. ಮಕ್ಕಳಾದಿಯಾಗಿ ಮನೆ ಮಂದಿಯೆಲ್ಲಾ ತುಟಿಯ ಮೇಲೆ ಕೈ ಇಟ್ಟುಕೊಂಡು ಅಚ್ಚರಿಯಿಂದ ಕೇಳುತ್ತಿದ್ದರು. ಅದಕ್ಕಾಗಿ ಒಂದು ಹರಿವಾಣದ ತುಂಬಾ ಅಡಿಕೆ ಸಂಭಾವನೆ ಅವನಿಗೆ ದೊರೆಯುತ್ತಿತ್ತು. ಮುಂದೆ ಕೆಲಕಾಲದ ನಂತರ ಬೊಮ್ಮಣ್ಣ ಗೃಹಸ್ಥನಾಗಿ ನಮ್ಮ ಊರಲ್ಲೇ ಹೋಟೆಲು ಇಟ್ಟುಕೊಂಡಿದ್ದು, ಕಾಲಾನಂತರ ಗತಿಸಿದ.

ಇವರಿಬ್ಬರಿಗಿಂತಲೂ ಅತಿ ಹೆಚ್ಚು ಪ್ರಾಮುಖ್ಯ ಹಾಗೂ ಜನಪ್ರಿಯವಾಗಿದ್ದವನು ಗಣಮಗ ಬಚ್ಚ. ನಾನು ನೋಡುವಾಗಲೇ ತುಂಬಾ ವಯಸ್ಸಾಗಿ ಮುದುಕನಾಗಿದ್ದ ಬಚ್ಚ ನಮ್ಮೂರು ಮತ್ತು ಆಜುಬಾಜಿನ ಪ್ರದೇಶಗಳಲ್ಲಿ ಪ್ರಭಾವಶಾಲಿ ವ್ಯಕ್ತಿಯಾಗಿದ್ದ. ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ಅಗಸರ ಜಾತಿಯ ಬಚ್ಚನ ಮೇಲೆ ಮೊದಲೇ ಗಣ ಬರುತ್ತಿತ್ತಂತೆ. ಇಲ್ಲಿಗೆ ಬಂದ ಮೇಲೆ ನಮ್ಮ ಆಚೆ ಕೇರಿ ತೋಟದ ಹತ್ತಿರ ತನ್ನ ಬಿಡಾರ ವನ್ನು ಹಾಕಿದ ; ಹಾಗೂ ಅವನ ನಂಬಿಕೆಯ ದೈವ "ಚಿಕ್ಕಮ್ಮ ದೇವಿ"ಯನ್ನು ಸಹ ಇಲ್ಲಿಗೆ ತಂದು ಸ್ಥಾಪಿಸಿದ. ಅದಕ್ಕೆ ನಮ್ಮ ಮನೆಯವರ ಸಹಾಯದಿಂದಲೇ ಪುಟ್ಟ ದೇವಸ್ಥಾನವನ್ನು ತನ್ನ ಮನೆಯ ಹತ್ತಿರ ಕಟ್ಟಿಸಿಕೊಂಡಿದ್ದ. ನನ್ನ ಚಿಕ್ಕಪ್ಪ ದೊ|| ಶಿದ್ದಪ್ಪ ಗೌಡರೇ ಅದರ ಉಸ್ತುವಾರಿ ಮತ್ತು ಆಗುಹೋಗುಗಳನ್ನು ನಿಭಾಯಿಸುವ ಕರ್ತೃ ವಾಗಿದ್ದರು. ಮೂಲದೇವಿ ಚಿಕ್ಕಮ್ಮ ಕಲ್ಲಿನಲ್ಲಿ ಕಡೆದ ಪುಟ್ಟ ಮೂರ್ತಿ. ದೇವಸ್ಥಾನದ ಪ್ರಾಂಗಣದಲ್ಲಿ ಅದಕ್ಕೆ ಸಹಾಯಕರೆನಿಸಿದ "ಪಂಜೊಳ್ಳಿ", "ಹಾಯ್‌ಗೊಳ್ಳಿ", "ರಾವು" ಮುಂತಾದವುಗಳ ಕಲ್ಲುಗಳಿದ್ದವು. ಬಹಳ ಕಾಲದಿಂದಲೂ ಆಸುಪಾಸಿನ ಜಾಗ ಗಳಲ್ಲಿ ದೇವಸ್ಥಾನಗಳಿರಲಿಲ್ಲವಾದುದರಿಂದ ನಮ್ಮ ದೇವಸ್ಥಾನ ಅಲ್ಲಿಯ ಎಲ್ಲರ ಆರಾಧ್ಯದ ಕೇಂದ್ರವಾಯಿತು. ಅದಕ್ಕೆ ಬಹುಪಾಲು ಬಚ್ಚ ಮತ್ತು ಅವನ ಮೇಲೆ

"ಬರುತ್ತಿದ್ದ" ಗಣದ ಮಹಿಮೆ ಕಾರಣ. ಜೊತೆಗೆ ಅವನದೊಂದು ಅನುಕರಣೀಯ ವ್ಯಕ್ತಿತ್ವ ಕೂಡ.

ಪ್ರತಿ ಶನಿವಾರ ಸಾಯಂಕಾಲ ದೇವಸ್ಥಾನದಲ್ಲಿ ಗಣ ಬರುತ್ತಿತ್ತು. ಸುತ್ತಲ ಪ್ರದೇಶಗಳೇ ಅಲ್ಲದೆ ದೂರದ ಊರುಗಳಿಂದಲೂ ಹತ್ತಿಪ್ಪತ್ತು ಜನರಾದರೂ ಅಲ್ಲಿ ಸೇರಿರುತ್ತಿದ್ದರು. ಅಂದಿನ ದಿನವೆಲ್ಲಾ ಮಡಿಯಲ್ಲಿರುತ್ತಿದ್ದ ಗಣ ಮಗ ಬಚ್ಚ, ಸಾಯಂಕಾಲ ಮತ್ತೆ ಮಿಂದು ಮಡಿಯುಟ್ಟು ದೇವಸ್ಥಾನಕ್ಕೆ ಬರುತ್ತಿದ್ದ. ಮೊದಲೇ ಶೃಂಗರಿಸಿದ್ದ ದೇವಿಯ ಮೂರ್ತಿಯ ಎದುರಿಗೆ ಕೈಮುಗಿದು ನಿಲ್ಲುತ್ತಿದ್ದ. ಜಾಗಟೆ-ಶಂಖಗಳ ಶಬ್ದ ಮೊದಲಾಗುತ್ತದೆ. ಅವನು ಒಂದು ರೀತಿಯಲ್ಲಿ ನಡುಗುತ್ತಾ ಅತ್ತ ಇತ್ತ ಭಾಗುತ್ತಾ ಹೂಂಕರಿಸುತ್ತಿರುತ್ತಾನೆ. ಹೂಂಕಾರ ಜಾಸ್ತಿಯಾಗುತ್ತಿದ್ದಂತೆಲ್ಲಾ ಬೆತ್ತದ ಚಡಿಯಿಂದ ತನಗೆ ತಾನೇ ಹೊಡೆದುಕೊಳ್ಳುವುದಕ್ಕೆ ಆರಂಭಿಸುತ್ತಾನೆ. ಭಕ್ತಾದಿಗಳು "ತಾಯೇ, ಪಾತ್ರಿಯನ್ನು (ಗಣಮಗ) ಧಂಡಿಸುವುದು ಬೇಡ, ಕಾಪಾಡು, ಕಾಪಾಡು" ಪ್ರಾರ್ಥಿಸಲಾರಂಭಿಸುತ್ತಾರೆ. ಗಣ ಈಗ ಅವನ್ನೆಲ್ಲಾ ನಿಲ್ಲಿಸಿ ಬಾಯಿ ಬಿಟ್ಟು ಮಾತನಾಡಲು ಆರಂಭಿಸುತ್ತದೆ. ತನ್ನನ್ನು ಬರಮಾಡಿದ್ದರ ಕಾರಣವೇನು ಎಂದು ಕರ್ತೃವನ್ನು ಕೇಳುತ್ತದೆ. ಕರ್ತೃ ಶಿದ್ದಪ್ಪಗೌಡರು "ತಮ್ಮ ತಮ್ಮ ಕಷ್ಟಗಳ ನಿವಾರಣೆಗಾಗಿ ನಿನ್ನನ್ನೇ ನಂಬಿ ಬಹಳ ದೂರದ ಊರುಗಳಿಂದ ಜನ ಬಂದಿದ್ದಾರೆ. ಅವರಿಗೆ ಪರಿಹಾರ ತೋರಿಸು" ಎಂದು ನಿವೇದಿಸಿಕೊಳ್ಳುತ್ತಾರೆ. ಮುಂದೆ ಜನ ಒಬ್ಬೊಬ್ಬರಾಗಿ ತಮ್ಮ ಕಷ್ಟಸುಖಗಳನ್ನು ಹೇಳಲಾರಂಭಿಸುತ್ತಾರೆ. ಪ್ರತಿಯೊಬ್ಬರಿಗೂ ಅವರು ನಂಬಬಹುದಾದಂಥ ಸಮಾಧಾನದ ಉತ್ತರಗಳು ಗಣದಿಂದ ಬರುತ್ತವೆ. ಕೆಲವರ ಕಷ್ಟಗಳ ನಿವಾರಣೆಗೆ ವಾಯಿದೆ ಸೂಚಿಸಿ ತೆಂಗಿನಕಾಯಿ ಮಂತ್ರಿಸಿಕೊಡಬಹುದು, ಕೆಲವರಿಗೆ ನೀರು ಮಂತ್ರಿಸಿ ಕೊಡುವುದು ; ಭಸ್ಮ ನೀಡುವುದು, ಮಕ್ಕಳಿಗೆ ಚಡಿಯಿಂದ ಹೊಡದಂತೆ ನಟಿಸುವುದು ಮುಂತಾದ ಕಾರ್ಯಗಳು ಜರುಗುತ್ತವೆ. ಅದೆಲ್ಲಾ ಮುಗಿದ ಮೇಲೆ ದೇವಿಗೆ ಮಹಾ ಮಂಗಳಾರತಿ ಜರುಗುತ್ತದೆ. ಭಕ್ತಾದಿಗಳು ತಮ್ಮ ಶಕ್ತ್ಯಾನುಸಾರ ಕಾಣಿಕೆ ಸಲ್ಲಿಸುತ್ತಾರೆ. ಗಣ ಮತ್ತೆ ಹೂಂಕರಿಸುತ್ತಾ, ನಡುಗಿ ನೆಲದ ಮೇಲೆ ಬೋರಲಾಗಿ ಮಲಗುತ್ತದೆ. ಗಣ ಮಗ ಬಚ್ಚ ಸ್ವಲ್ಪ ಹೊತ್ತಿಗೇ ಎಚ್ಚರವಾಗುತ್ತಾನೆ. ಜನ ಎಳನೀರು ಅಥವಾ ಪಾನಕ ನೀಡುತ್ತಾರೆ. ಅಂದಿಗೆ ಅವತ್ತಿನ ಕಾರ್ಯ ಮುಗಿಯುತ್ತದೆ.

ಕೆಲಸಾರಿ ಮನೆಯಲ್ಲಿ ಯಾರಿಗಾದರೂ ಸ್ವಲ್ಪ ಗಂಭೀರ ರೀತಿಯ ಕಾಯಿಲೆಯಾಗಿದ್ದರೆ ಅವರ ಮನೆಯಲ್ಲೇ ಗಣ ಬರಿಸುವ ಏರ್ಪಾಡು ಮಾಡುತ್ತಿದ್ದರು. ಆ ಮನೆಯವರು ಆ ದಿನವೆಲ್ಲಾ ತುಂಬಾ ಮಡಿಯಿಂದಿರಬೇಕಾಗುತ್ತದೆ. ಎಂದಿನಂತೆ ಸಾಯಂಕಾಲ ಗಣ ಬರುವ ಏರ್ಪಾಡಾಗಿರುತ್ತದೆ. ದೇವರ ಮೂರ್ತಿಯ ಅಲಂಕರಿಸಿದ ಕಳಶವೊಂದರ ಎದುರಿಗೆ ಗಣ ಬರುತ್ತದೆ. ಮತ್ತೆಲ್ಲಾ ವಿಷಯಗಳು ದೇವಸ್ಥಾನದಲ್ಲೇ ಜರುಗದಂತೆಯೇ ಸಾಗುತ್ತದೆ. ಆದರೆ ಆ ದಿನ ಆ ಮನೆಯವರ ಸಮಸ್ಯೆಗಳಿಗೆ ಮಾತ್ರ ಮೀಸಲಾಗಿರುತ್ತದೆ. ಸಾಮಾನ್ಯವಾಗಿ

ರಾವು ತೆಗೆಯುವುದು, ದೆವ್ವ ಬಿಡಿಸುವಂಥ ಕಾರ್ಯಗಳು ಅಂದು ನಡೆಯುತ್ತವೆ. ಬಚ್ಚ ಮತ್ತು ಅವನ ಗಣದ ಮಹಿಮೆ ತುಂಬಾ ಪರಿಣಾಮಕಾರಿಯಾಗಿದ್ದು, ಸುತ್ತಲ ಊರುಗಳಿಂದ ಪ್ರತಿದಿನ ಹಲವಾರು ಜನ ಅಲ್ಲಿಗೆ ಬಂದು ಹೋಗುತ್ತಿದ್ದರು. ಅವನ ಬಿಡಾರದ ಸುತ್ತ ದಕ್ಷಿಣ ಕನ್ನಡ ಜಿಲ್ಲೆ ಕೂಲಿಗಾರರು, ಶೇರೆಗಾರರ ಬಿಡಾರಗಳೂ ಇರುತ್ತಿದ್ದವು. ಕ್ರಮೇಣ ಒಂದೆರಡು ಅಂಗಡಿ, ಹೋಟೆಲುಗಳೂ ಅಲ್ಲಿ ತಲೆಯೆತ್ತಿದ್ದವು. ಅದೊಂದು ರೀತಿಯಲ್ಲಿ ನಮ್ಮೂರಿನ ಪೇಟೆಯೇ ಆಯಿತು.

ಗಣ ಬರುವುದೇ ಅಲ್ಲದೆ ಬಚ್ಚ ನಿಮಿತ್ತ ನೋಡುತ್ತಿದ್ದ. ಅಗಲವಾದ ಮಣೆಯೊಂದರ ತುದಿಯಲ್ಲಿ ಅಕ್ಕಿಕಾಳುಗಳ ಗುಪ್ಪೆಯೊಂದಿರುತ್ತಿತ್ತು. ಪ್ರಶ್ನೆ ಕೇಳಿದಾಕ್ಷಣ ಅದರಿಂದ ಒದು ಚಿಟಿಕೆ ಅಕ್ಕಿ ತೆಗೆದು ಮಣೆಯ ಮಧ್ಯೆ ಇರಿಸಿ ಅವುಗಳನ್ನು ಹಲವು ಗುಂಪುಗಳಾಗಿ ವಿಂಗಡಿಸಿ, ಮನಸ್ಸಿನಲ್ಲಿ ಏನೋ ಲೆಕ್ಕಾಚಾರ ಮಾಡಿ ಉತ್ತರ ಹೇಳುತ್ತಿದ್ದ. ಬಹುಪಾಲು ಜನರ ಮನೆಮಂದಿಯ ಕಷ್ಟಸುಖಗಳ ಪರಿಚಯವಿದ್ದ ಬಚ್ಚ ಬಹುಶಃ ಅವರ ಮನೋಭಿಲಾಷೆಗಳನ್ನು ಅರಿತುಕೊಂಡು ಅವರ ಸಮಸ್ಯೆಗಳಿಗೆ ಸಮಂಜಸ ಉತ್ತರ ಹೇಳುತ್ತಿದ್ದನೆನಿಸುತ್ತದೆ. ಹಾಗಾಗಿ ಅವನ ಮನೆಯಲ್ಲಿ ನಿಮಿತ್ತ ಕೇಳಿ ಪರಿಹಾರ ಪಡೆಯುವವರ ಸಾಲು ಸಾಲೇ ಇರುತ್ತಿದ್ದವು. ಈ ಕೆಲಸಕಾರ್ಯಗಳಿಗೆ ಅವನೇನು ನಿಗದಿತ ಶುಲ್ಕ ವಿರಿಸಿರಲಿಲ್ಲ. ತಮ್ಮ ಶಕ್ತ್ಯಾನುಸಾರ ಒಂದೋ-ಎರಡೋ ಪಾವಲಿ (ಪಾವಲಿ = ನಾಲ್ಕಾಣೆ) ಕೊಡುತ್ತಿದ್ದರು.

ನನ್ನ ಬಾಲ್ಯದಲ್ಲಿ ನನಗುಂಟಾಗುತ್ತಿದ್ದ ಹಲವು "ಕಂಟಕ"ಗಳಿಗೆ ಬಚ್ಚನ ಸಾಂತ್ವನವೇ ಪ್ರಮುಖವಾಗಿರುತ್ತಿತ್ತು. ನನ್ನ ಕೊರಳಲ್ಲಿ ಹಲವು ಬಗೆಯ ಬಚ್ಚನ ಅಂತ್ರ-ಚೀಟುಗಳು ನೇತಾಡುತ್ತಿದ್ದುದುವು! ಶಾಲಾ ಕಾಲೇಜುಗಳಿಗೆ ಹೋಗಲು ಮೊದಲು ಮಾಡಿದ ಮೇಲೆ ಪ್ರತಿವರ್ಷ ನನ್ನ ಗೆಲುವಿಗೆ ಬಚ್ಚನ ದೇವರೇ ಕಾರಣವೆಂದು, ಪ್ರತಿ ಬೇಸಿಗೆಯಲ್ಲಿ ಅವ್ವ ಜೋಡು ಹಣ್ಣುಕಾಯಿ ಮಾಡಿಸುವ ಪದ್ಧತಿಯನ್ನು ಜಾರಿಗೆ ತಂದಿದ್ದಳು!

ಗಣಮಗ ಬಚ್ಚ ತನ್ನ ಮಂತ್ರವಾದಿತನವೇ ಅಲ್ಲದೆ ಇತರ ಕಾರಣಗಳಿಂದಲೂ ಒಬ್ಬ ಆದರ್ಶ ವ್ಯಕ್ತಿಯಾಗಿದ್ದ. ಊರಲ್ಲಿನ ಇತರರಂತೆ ಅವನು 8-10 ಖಂಡುಗ ಗದ್ದೆಯನ್ನು ಗೇಣಿಗೆ ಮಾಡುತ್ತಿದ್ದ. ಮನೆಯಲ್ಲಿ ಹೆಂಡತಿ ಅಬ್ಬಕ್ಕ, ಅಲ್ಲದೆ ಎರಡು ಜನ ಸೋದರ ಅಳಿಯಂದಿರೂ ಇದ್ದರು. ಅವರೆಲ್ಲರ ಸಹಾಯದಿಂದ ಗದ್ದೆ ಕೃಷಿ ಮಾಡುವುದರಲ್ಲಿ ಅಲ್ಲಿಯ ರೈತರಿಗೆಲ್ಲಾ ಮಾದರಿಯಂತಿದ್ದ. ಎಲ್ಲರಿಗಿಂತಲೂ ಮೊದಲೇ ಗದ್ದೆಗಳನ್ನು ಉತ್ತುಬಿತ್ತಿ ಒಳ್ಳೆಯ ಫಸಲು ತೆಗೆಯುವುದಕ್ಕೆ ಹೆಸರುವಾಸಿಯಾಗಿದ್ದ. ಜನ ಅವನು ಜರುಗಿಸುತ್ತಿದ್ದ ಕ್ರಮಗಳನ್ನು ಅನುಸರಿಸುತ್ತಿದ್ದರು.

ಮುದುಕನಾಗಿದ್ದು, ಗೀರಲು ಮೀಸೆ, ಬೊಚ್ಚು ಬಾಯಿ, ಸದಾ ಅಡಿಕೆ ಕೊಚ್ಚುತ್ತಾ ಎಲೆ ಅಡಿಕೆ ಹಾಕಿಕೊಳ್ಳುತ್ತಿದ್ದ ಅವನ ಚಿತ್ರ ಈಗಲೂ ನನ್ನ ಕಣ್ಣ ಮುಂದಿರುವಂತಿದೆ.

ಎಲ್ಲಿಂದಲೋ ಕೊಂಡು ತಂದಿದ್ದ ಪೋರ್ಸಿಲೀನ್ ಸರಸ್ವತಿ ವಿಗ್ರಹವನ್ನು ನಾನು ಓದಲು ಶುರು ಮಾಡಿದಾಗಲೇ ತಂದುಕೊಟ್ಟಿದ್ದ. ಬಹಳ ಕಾಲ ಅದು ನನ್ನ ಆರಾಧ್ಯ ದೈವವಾಗಿತ್ತು.

ಬಚ್ಚನ ಮತ್ತು ಸುತ್ತಲ ಪ್ರದೇಶಗಳನ್ನು ತುಂಬಾ ಅಚ್ಚುಕಟ್ಟಾಗಿ ಇರಿಸಿಕೊಂಡಿದ್ದ. ಮನೆಯಂತೂ ಕೆಮ್ಮಣ್ಣಿನಿಂದ ನಯವಾಗಿ ಬಳಿದು ಸಾರಿಸಿದ್ದು, ಈಗಿನವರ ರೆಡ್ ಆಕ್ಸೈಡ್ ತರ ಪಳಪಳಿಸುತ್ತಿತ್ತು. ಕಾಲ ಕ್ರಮೇಣ ಅವನು ಅದಾವುದೋ ಕಾಯಿಲೆಯಿಂದ ಕೆಲಕಾಲ ಬಳಲುತ್ತಿದ್ದ. ಅವನು ಗತಿಸಿದಾಗ ರಜೆ ಸಮಯವಾಗಿದ್ದು, ನಾನು ಊರಲ್ಲೇ ಇದ್ದೆ. ಅಂದಿನ ದಿನ ಭಯ ಭೀತಿಯ ವಾತಾವರಣ ಹುಟ್ಟಿಸಿತ್ತು. ಅವನೊಬ್ಬ ಮಂತ್ರ ವಾದಿಯಾಗಿದ್ದು ಅವನ ಹತೋಟಿಯಲ್ಲಿದ್ದಿರಬಹುದಾದ ಗಣಂಗಳು ಏನು ತೊಂದರೆ ಯುಂಟುಮಾಡುವುದೋ ಎಂಬ ಹೆದರಿಕೆ ಎಲ್ಲರಿಗೂ ಇದ್ದಂತಿತ್ತು. ನನ್ನ ಚಿಕ್ಕಪ್ಪ ದೇವಸ್ಥಾನ ಕರ್ತೃವೇ ಮುಂದೆ ನಿಂತು ಶವ ಸಂಸ್ಕಾರ ಮುಂತಾದ ವಿಧಿವಿಧಾನಗಳನ್ನು ಮಾಡಿಸಿದರು. ಅವನ ಸಾವಿನಿಂದ ಊರಿಗೆ ಏನೂ ಆಗಲಿಲ್ಲ. ಆದರೆ ಜನ ಮಾತ್ರ ಮುಮ್ಮ್ಮಲ ಮರುಗಿದರು.

ಬಚ್ಚ, ಜೀವಂತವಿರುವಾಗಲೇ ಅವನ ಅಳಿಯ ಶೀನನ ಮೇಲೆ ಗಣಬರುವ ಸೂಚನೆಗಳು ಕಂಡುಬರುತ್ತಿದ್ದವು. ಬಚ್ಚ ಸತ್ತ ನಂತರ ಅದು ಬರುತ್ತಿತ್ತು ಕೂಡ. ಆದರೆ ಅದರ ಮಹಿಮೆ ಜನರ ಮೇಲೆ ಅಷ್ಟೊಂದು ಪ್ರಭಾವ ಬೀರಲಿಲ್ಲ. ಕ್ರಮೇಣ ಜನರಿಗೂ ನಂಬಿಕೆ ಹೋಯಿತು. ಅವರ ಸಮಸ್ಯೆಗಳಿಗೆ ಬಚ್ಚನೇ ಪರಿಹಾರ ಒದಗಿಸಬೇಕಾಗು ತ್ತಿತ್ತು. ಅದಕ್ಕೊಂದು ಉಪಾಯವನ್ನು ಕಂಡುಹಿಡಿದುಕೊಂಡಿದ್ದರು. ಮೊದಲಿಗೆ ಶೀನನ ಮೇಲೆ ಬಚ್ಚನ ಜಕಣಿ ಬರುವಂತೆ ಮಾಡುವುದು ; ನಂತರ ಜಕಣಿಯ ಮೇಲೆ ಗಣ ಬರುವುದು ! ಈ ತಂತ್ರದಿಂದಲೂ ಕೆಲ ಸಮಯ ಜನ ಪರಿಹಾರ ಕೊಂಡುಕೊಂಡಿದ್ದರು.

ದೈವಭೂತ, ಜಕ್ಕಿಣಿಗಳಲ್ಲಿ ನಮಗೀಗ ನಂಬಿಕೆ ಇಲ್ಲದಿರಬಹುದು. ಆ ಕಾಲದಲ್ಲಿ ಜನರಿಗೆ ಅವುಗಳನ್ನು ನಂಬದೆ ಬೇರಾವ ಬದಲೀ ವ್ಯವಸ್ಥೆಗಳಿರಲಿಲ್ಲ. ಆದರೆ ಬಚ್ಚನಂಥ ಒಬ್ಬ ಸರಳ ಸಜ್ಜನ ಸುತ್ತಲ ಜನಸಮೂಹಕ್ಕೆ ಉಪಕಾರಿಯಾಗಿದ್ದನೆಂಬುದನ್ನು (ಈಗ ನಿರೀಶ್ವರವಾದಿಯಾದ) ನಾನೂ ಸಹ ಕಣ್ಣಾರೆ ಕಂಡು ನಂಬಿದ್ದೆ.

ಕಾಲ ಕ್ರಮೇಣ ನಮ್ಮೂರು ಮುಳುಗಿತು. ಜನರೆಲ್ಲಾ ಊರು ತ್ಯಜಿಸಿ ದಿಕ್ಕಾಪಾಲಾಗಿ ಹೋದರು. ಶೀನನೂ ತನ್ನ ದೇವಿಯ ವಿಗ್ರಹವನ್ನು ತೆಗೆದುಕೊಂಡು ಬೇರೊಂದು ಊರಲ್ಲಿ ನೆಲಸಿದ್ದಾನಂತೆ. ನನಗುಳಿದಿರುವದು ನಮ್ಮೂರಿನ ಆ ಕಾಲದ ಅಚ್ಚಳಿಯದ ಸ್ಮರಣೆ ಯೊಂದೇ !

# ಎಳೆಗರು ಎತ್ತಾಗದೇ ?

ಹೊಲಗಳಲ್ಲಿ ಉಳುಮೆ ಮತ್ತು ಗಾಡಿ ಎಳೆಯುವುದಕ್ಕಾಗಿರುವ ಎತ್ತುಗಳು ಪ್ರಾಪಂಚಿಕ ವಿಷಯಗಳಲ್ಲಿ ನಿರಾಸಕ್ತಿ ಹೊಂದಿದ್ದು, ಬರೇ ದುಡಿಮೆ ಪಶುಗಳಾಗಿರುವುದು ಸರ್ವೇ ಸಾಮಾನ್ಯ ; ಅವುಗಳಿಗೆ ಲೈಂಗಿಕಾಸಕ್ತಿಯಾಗಲಿ, ಸಂತಾನೋತ್ಪತ್ತಿಯಾಗಲೀ ಸಾಧ್ಯವಿರುವುದಿಲ್ಲ. ಬೀದಿಗಳಲ್ಲಿ ಗುಟುರು ಹಾಕುತ್ತಾ, ಸದ್ದು ಹೊಡೆದು ರಾಜಠೀವಿಯಿಂದ ಓಡಾಡುವ ಗೂಳಿಗಳಿಗೂ, ಈ ಎತ್ತುಗಳಿಗೂ ಎಷ್ಟು ವ್ಯತ್ಯಾಸ ನೋಡಿ. ಹತ್ತಿರದಲ್ಲಿ ಹಸುಗಳಿದ್ದರಂತೂ ಅವುಗಳ ಆರ್ಭಟ ಹೆಚ್ಚಾಗುತ್ತದೆ. ಕಾರಣವಿಷ್ಟೆ : ದುಡಿಮೆಯ ಪಶುಗಳನ್ನಾಗಿಸುವ ಎಳೆಗರುಗಳ ಲೈಂಗಿಕ ಗ್ರಂಥಿ-ವೃಷಣವನ್ನು ಬೇಕೆಂತಲೇ ನಾಶ ಪಡಿಸಿರುತ್ತಾರೆ. ಹಳ್ಳಿಗಳಲ್ಲಿ ಅಂತಹ ಎಳೆಗರುಗಳ ವೃಷಣ ಮರ್ಜನ ಕಾರ್ಯ ಒಂದೊಂದು ಸಾರಿ ಸಾಮೂಹಿಕವಾಗಿ ಬಹಿರಂಗವಾಗಿಯೇ ಜರುಗುತ್ತದೆ. ಅಂತಹ ಕಾರ್ಯವನ್ನು ನೋಡ ಹೋಗಿ ನನ್ನ ಪ್ರಾಣಕ್ಕೆ ಒದಗಿದ ಸಂಚಕಾರ ಪ್ರಸಂಗವೊಂದನ್ನು ನೆನಪಿಸಿಕೊಂಡರೆ ಈಗಲೂ ನಡುಕ ಉಂಟಾಗುತ್ತದೆ.

ಇಂತಹ ಕಾರ್ಯ ನನಗೆ ಸುಮಾರು ನಾಲ್ಕಾರು ವರ್ಷಗಳಾಗಿದ್ದಾಗ ನಮ್ಮ ಮನೆಯ ಅಂಗಳದಲ್ಲೇ ನಡೆಯಿತು. ಸುತ್ತಲ ಹಳ್ಳಿಗಳ 8-10 ಎಳೆಯ ಗೂಳಿಗಳನ್ನು ಅದಕ್ಕಾಗಿ ಅಲ್ಲಿ ಸೇರಿಸಿದ್ದರು. ನಮ್ಮ ಪಕ್ಕದ ಊರಿನ ದೇವರ ಪಂಗಡಕ್ಕೆ ಸೇರಿದ ಟೀಕನಾಯ್ಕ ಎಂಬವನು ಈ ಕಾರ್ಯದಲ್ಲಿ ಪರಿಣಿತಿ ಪಡೆದವನು. ಸಾಮಾನ್ಯವಾಗಿ ಅಂತಹ ಗೂಳಿಗಳ ಕಾಲುಗಳಿಗೆ ಹಗ್ಗ ಸುತ್ತಿ ನೆಲಕ್ಕೆ ಬೀಳಿಸಿ ಬಿಗಿದು ಕಟ್ಟುತ್ತಾರೆ. ಅಲ್ಲದೆ ಇನ್ನೂ ಕೆಲವರು ಅದನ್ನು ನೆಲಕ್ಕೆ ಅಪ್ಪಳಿಸಿ ಹಿಡಿದುಕೊಳ್ಳುತ್ತಾರೆ. ಅದರ ವೃಷಣವನ್ನು ಹಿಡಿದುಕೊಂಡು ಎಣ್ಣೆ ಹಚ್ಚಿ ನಯವಾಗಿ ತಿಕ್ಕಲಾರಂಭಿಸುತ್ತಾರೆ. ನಂತರ ಎರಡು ನಯವಾದ ರೂಲರ್‌ಗಳಂತಹ ಮರದ ತುಂಡುಗಳ ನಡುವೆ ವೃಷಣಗಳನ್ನಿರಿಸಿ ಬಲವಾಗಿ ಒತ್ತುತ್ತಾ ಅವು ಒಳಗೇ ಕರಗಿ ನೀರಾಗುವಂತೆ ಮಾಡುತ್ತಾರೆ. ನೋವಿನಿಂದ ಎಷ್ಟು ಒದ್ದಾಡಿದರೂ ಒತ್ತಿ ಹಿಡಿದವರು ಅದು ತಪ್ಪಿಸಿಕೊಂಡು ಹೋಗದಂತೆ ಹಿಡಿದುಕೊಂಡಿರುತ್ತಾರೆ. ಇಂತಹ ಕಾರ್ಯ ಜರುಗುತ್ತಿರುವಾಗ ಸಾಮಾನ್ಯವಾಗಿ ಅಲ್ಲಿ ಬೇರೆ ಯಾರೂ ಇರದಂತೆ ಎಚ್ಚರಿಕೆ ವಹಿಸುತ್ತಾರೆ. ನನ್ನನ್ನೂ ಗದರಿಸಿ ಒಳಗಡೆ ಕಳುಹಿಸಿದ್ದರು. ಆದರೆ ಅಲ್ಲಿ

ಏನು ನಡೆಯುತ್ತದೆಂಬ ಕುತೂಹಲ ನನ್ನ ಬೆನ್ನು ಹತ್ತಿರಬೇಕು. ಮನೆಯ ಪಕ್ಕದಲ್ಲಿದ್ದ ಓಣಿಯೊಂದರಲ್ಲಿ ಯಾರ ಗಮನಕ್ಕೂ ಬಾರದಂತೆ ಅಡಗಿ ವೀಕ್ಷಿಸುತ್ತಾ ನಿಂತಿದ್ದೆ. ಮೊದಲು ಒಂದೆರಡು ಗೂಳಿಗಳ ವೃಷಣ ಮರ್ಜನ ಕಾರ್ಯ ಯಾವುದೇ ತೊಡಕಿಲ್ಲದೇ ಜರುಗಿತು. ಇನ್ನೊಂದು "ರಾಡಿ"ಯ ತರಹ ಟೇಂಕಾರ ಮಾಡುತ್ತಿದ್ದ ಗೂಳಿಯ ಸರದಿ ಬಂತು. ಅದನ್ನು ಕೆಳಗುರುಳಿಸುವುದಕ್ಕೇ ಪ್ರಯಾಸವಾಯಿತು. ನಾಲ್ಕಾರು ಜನ ಒತ್ತಿಹಿಡಿದ ನಂತರ ಟೀಕನಾಯ್ಕ ಅದರ ವೃಷಣಕ್ಕೆ ಎಣ್ಣೆ ತೀಡಿ ಮರದ ದೊಣ್ಣೆಗಳನ್ನು ಅಮುಕಿ ಹಿಡಿಯಲು ಶುರು ಮಾಡಿದ. ಗೂಳಿ ಅಷ್ಟೂ ಜನ ಒತ್ತಿ ಹಿಡಿದಿದ್ದರೂ ಲೆಕ್ಕಿಸದೆ ಕಾಲಿಗೆ ಕಟ್ಟಿದ ಹಗ್ಗಗಳನ್ನು ಬಿಡಿಸಿಕೊಂಡು ಹೂಂಕರಿಸಿ ಎದ್ದು ನಿಂತಿತು. ಜನರೆಲ್ಲಾ ಹೆದರಿ ಅದರ ಕೈ ಬಿಟ್ಟು ದೂರ ಸರಿದರು. ಗೂಳಿ ದಿಕ್ಕು ತಪ್ಪಿ ಓಡತೊಡಗಿತು. ಅದು ನಾನಿದ್ದ ಓಣಿಯ ಕಡೆಗೇ ಧಾವಿಸಿತು. ಅಲ್ಲಿ ನಾನು ನಿಂತಿರುವುದನ್ನು ನೋಡಿದ ಜನರು ನನ್ನ ಗತಿ ಮುಗಿದೇ ಹೋಯಿತೆಂದು ಹಾಹಾಕಾರ ಮಾಡಿ ಅದರ ಹಿಂದೆ ಬೆನ್ನಟ್ಟಿದ್ದರು. ಅದು ಇನ್ನೂ ರಭಸದಿಂದ ನುಗ್ಗಿತು. ಅಲ್ಲಿ ಗೂಳಿಗೆ ನನ್ನ ಮೇಲೆಹಾರದೆ ಬೇರೆ ಕಡೆಯಿಂದ ಹೋಗಲು ಒಂದಿನಿತೂ ಜಾಗವಿರಲಿಲ್ಲ. ಉಪಾಯ ಅದ್ಹೇಗೆ ತಿಳಿಯಿತೋ ನಾನರಿಯೆ. ಓಣಿಯ ಒಂದು ಕಡೆ ಮನೆಯ ಗೋಡೆಗೆ ಅಳವಡಿಸಿದ್ದ ಮರದ "ಹಲಗಣೆ"ಯ ಪಟ್ಟಿ (Grill) ಮತ್ತೊಂದು ಕಡೆ ಮಳೆಗಾಲದಲ್ಲಿ ಮನೆಗೆ ಮಳೆಯ ಇರಚಲು ನೀರು ತಾಗದಂತೆ ಕಟ್ಟಿದ್ದ 'ಮರೆ ಕಟ್ಟಿದ' ತಡಿಕೆ, ಇವೆರಡರ ಮೇಲೆ ಒಂದೊಂದು ಕಾಲು ಇರಿಸಿಕೊಂಡು ಹತ್ತಿ ನಿಂತುಕೊಂಡುಬಿಟ್ಟೆ. ನನ್ನ ಕಾಲುಗಳ ಕೆಳಗಿನ ಸಂಧಿಯಲ್ಲಿ ಗೂಳಿ ಓಡಿಹೋಗುವುದಕ್ಕೆ ಸಾಕಷ್ಟು ಜಾಗ ಉಂಟಾಯಿತು. ಕಣ್ಣು ಬಿಟ್ಟು ಮುಚ್ಚುವುದರೊಳಗೆ ಗೂಳಿ ನನ್ನ ಕಾಲ ಕೆಳಗೆ ನುಸುಳಿ ಓಡಿಹೋಗಿಬಿಟ್ಟಿತು. ಗಡಗಡ ನಡುಗುತ್ತಾ ಕೆಳಗಿಳಿಯಲಾರದೆ ನಾನು ಅಲ್ಲೇ ನಿಂತುಬಿಟ್ಟೆ. ಅಲ್ಲಿ ನೆರೆದಿರುವವರಲ್ಲಿ ಕೆಲವರು ಬಂದು ನನ್ನನ್ನು ಕೆಳಗಿಳಿಸಿದರು.

ಅಷ್ಟರಲ್ಲೇ ಅಂಗಳದಲ್ಲಿನ ಗಲಾಟೆಯ ಕೂಗುಗಳು ಅಡಿಗೆ ಮನೆಯುನ್ನು ತಲ್ಪಿತ್ತು. ಅಡಿಗೆಯ ಕಾರ್ಯದಲ್ಲಿ ಮಗ್ನರಾಗಿದ್ದ ನನ್ನ ಅವ್ವ ಮತ್ತಿತರರು ಅಂಗಳಕ್ಕೆ ಬಂದರು. ನನಗೆ ಉಂಟಾದ ಪ್ರಾಣಾಪಾಯ ಸುಳುಹು ಗೊತ್ತಾದ ಕೂಡಲೇ ತಾಯಿಯ ರೋಧನ ಮುಗಿಲು ಮುಟ್ಟಿತು. ಜಾಗರೂಕತೆ ವಹಿಸದೆ ಅಂತಹ ಕಾರ್ಯವನ್ನು ಜರುಗಿಸಿ ನನ್ನನ್ನು ಅಪಾಯಕ್ಕೀಡುಮಾಡಿಸಿದ್ದಕ್ಕೆ ಅಲ್ಲಿದ್ದವರನ್ನೆಲ್ಲಾ ಶಪಿಸಿದಳು. ಇದರಿಂದ ನನಗೆ ಮತ್ತೆ "ರಾವು" ಹಿಡಿದಿರಬಹುದೆಂದು 2-3 ದಿನಗಳಲ್ಲಿ ರಾವು ತೆಗೆಸುವ ಕಾರ್ಯ ಮತ್ತೊಮ್ಮೆ ಜರುಗಿತು !

# ಓಂ ಶ್ರೀ ಗಣಾಧಿಪತಯೇ ನಮಃ

ಈ ಶತಮಾನದ ಆದಿ ಭಾಗದಲ್ಲಿ ಅಕ್ಷರಾಭ್ಯಾಸ ಮಾಡುವ ಅವಕಾಶ ಮಲೆನಾಡಿನವರಿಗೆ ಇರಲಿಲ್ಲವೆಂದೇ ಹೇಳಬಹುದು. ಯಾವ ಸಂಪರ್ಕ ಸಾಧನಗಳೂ ಇರದ ಮಲೆನಾಡಿನ ಗುಡ್ಡಬೆಟ್ಟಗಳ ನಡುವಿನ ಕಣಿವೆಗಳಲ್ಲಿ ರೈತಾಪಿ ಕಸುಬಿನಲ್ಲಿ ತೊಡಗಿಕೊಂಡವರ ಮಕ್ಕಳನ್ನು ವಿದ್ಯಾಭ್ಯಾಸದಲ್ಲಿ ತೊಡಗಿಸಲು ಸ್ಕೂಲುಗಳಿರುತ್ತಿದ್ದುದೇ ಅಪರೂಪ. ಎಲ್ಲೋ ದೂರದಲ್ಲಿದ್ದ ಶಾಲೆಗಳಿಗೆ ಮಕ್ಕಳನ್ನು ಕಳುಹಿಸುವುದು ದುಸ್ತರವಾಗುತ್ತಿತ್ತು. ಹತ್ತಿಪ್ಪತ್ತು ಮೈಲಿಗಳ ದೂರದಲ್ಲಿದ್ದ ಮಿಡ್ಲ್ ಸ್ಕೂಲು ಅಥವಾ ಹೈಸ್ಕೂಲುಗಳಿಗೆ ಕಳುಹಿಸಲು ಈಗಿನಂತೆ ಬಸ್ಸಿನ ಸೌಕರ್ಯಗಳಿರಲಿಲ್ಲ. ಅಲ್ಲಿ ಉಳಿದುಕೊಳ್ಳಲು ಹಾಸ್ಟಲುಗಳಂತೂ ಹುಟ್ಟಿಕೊಂಡೇ ಇರಲಿಲ್ಲ. ಕೆಲವು ಶ್ರೀಮಂತರು ಅಥವಾ ಮಧ್ಯಮ ವರ್ಗದವರು ಅಂತಹ ಶಾಲೆಗಳಿರುವ ಊರುಗಳಲ್ಲಿ ತಮ್ಮ ಮತ್ತು ಸಂಬಂಧಿಕರ ಮಕ್ಕಳಿಗಾಗಿ ಬಾಡಿಗೆ ಮನೆ ಮಾಡಿ, ಅಡಿಗೆಯವರನ್ನಿಟ್ಟು, ಸ್ಕೂಲಿಗೆ ಕಳಿಸುವ ಏರ್ಪಾಡು ಮಾಡುತ್ತಿದ್ದುದುಂಟು. ಎಲ್ಲೋ ಅಲ್ಲೊಬ್ಬ ಪುಟ್ಟಪ್ಪ, ಇಲ್ಲೊಬ್ಬ ಮಂಜಪ್ಪ ಅಥವಾ ನಾನಪ್ಪರಂಥ ಪ್ರತಿಭಾವಂತರು ಶಿವಮೊಗ್ಗ, ಮೈಸೂರು, ಬೆಂಗಳೂರುಗಳಿಗೆ ಹೋಗಿ ಮುಂದಿನ ವಿದ್ಯಾಭ್ಯಾಸದಲ್ಲಿ ತೊಡಗಿರುತ್ತಿದ್ದರು. ತೀರ್ಥಹಳ್ಳಿಯಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯವೊಂದು ಆರಂಭವಾದಾಗ (1931) ಬಹುಪಾಲು ಎಲ್ಲಾ ವರ್ಗದವರ ಮಕ್ಕಳೂ ಅಲ್ಲಿ ಮಿಡ್ಲ್ ಸ್ಕೂಲ್, ಹೈಸ್ಕೂಲ್‌ಗಳನ್ನು ಸೇರುವಂತಾಯಿತು.

ತಮ್ಮ ಮಕ್ಕಳನ್ನು ಓದಿಸಿ ವಿದ್ಯಾವಂತರನ್ನಾಗಿ ಮಾಡಬೇಕೆಂಬ ಅಭಿಲಾಷೆ ಇದ್ದವರೂ ತುಂಬಾ ವಿರಳ. ರೈತನ ಮಗ ಓದಿ ಮಾಡಬೇಕಾದ್ದದೇನಿದೆ ಎಂಬ ಮನೋಭಾವದವರೇ ಹೆಚ್ಚಾಗಿದ್ದ ಕಾಲ ಅದು. ಅದಕ್ಕೆ ಸರಿಯಾಗಿ ಹತ್ತಿರದಲ್ಲಿ ಶಾಲೆಗಳೂ ಇರುತ್ತಿರಲಿಲ್ಲ. ಹಾಗೆಂದು ಎಲ್ಲರೂ ಸುಮ್ಮನಿರುತ್ತಿದ್ದರೆಂದೂ ಹೇಳುವಂತಿಲ್ಲ. ಆ ಕಾಲದಲ್ಲಿ ಕೋರ್ಟು-ಕಛೇರಿಗಳಿಗೆ ಹೋಗಿ ಬರುವ ಅವಕಾಶವಿದ್ದವರಲ್ಲನೇಕರಿಗೆ, ತಮಗಾಗದಿದ್ದರೂ ತಮ್ಮ ಮಕ್ಕಳಿಗಾದರೂ ಅಕ್ಷರ ಜ್ಞಾನ ಉಂಟುಮಾಡಬೇಕೆಂಬ ಹಂಬಲ ಇರುತ್ತಿತ್ತು. ಕೆಲವರ ಮನೆಗಳಲ್ಲಿ 'ಐಗಳ ಮಠ' ಎಂಬ ಏರ್ಪಾಡುಗಳು ಕೆಲಕಾಲ ಇರುತ್ತಿದ್ದವು. ಕುಪ್ಪಳಿಯ ಮನೆಯಲ್ಲಿ ಅಂತಹ ಒಂದು ಐಗಳ ಮಠ ಇದ್ದು,

ಮುಂದೆ ರಾಷ್ಟ್ರಕವಿ ಕನ್ನಡದ ಮೊದಲ ಜ್ಞಾನ ಪೀಠ ಪ್ರಶಸ್ತಿ ವಿಜೇತ ಕುವೆಂಪು ಅವರ ವಿದ್ಯಾಭ್ಯಾಸ ಶುರುವಾದದ್ದೇ ಅಂತಹದರಲ್ಲಿ ! ನಮ್ಮ ಊರಿನ ಹತ್ತಿರದ ಕೆಲವು ಊರುಗಳಲ್ಲೂ ಇಂತಹ ಐಗಳ ಮಠಗಳಿರುತ್ತಿದ್ದವು. ಮುಂದೆ ನಾನು ಸ್ಕೂಲಿಗೆ ಸೇರಿ ಹೊರ ಊರುಗಳಲ್ಲಿದ್ದಾಗ ನಮ್ಮ ಮನೆಯಲ್ಲಿರುವ ಇತರ ಮಕ್ಕಳಿಗೆ ಅಕ್ಷರ ಕಲಿಸಲು ದಕ್ಷಿಣ ಕನ್ನಡ ಜಿಲ್ಲೆಯಿಂದ ಒಬ್ಬ ವಿದ್ಯಾವಂತ ಶೆಟ್ಟರನ್ನು ಕರೆಸಿ, ಪಾಠ ಹೇಳಿ ಕೊಡಿಸುತ್ತಿದ್ದರು. ಮುಂದೆ ಕೆಲವು ವರ್ಷಗಳ ನಂತರ ನಮ್ಮ ಹಳ್ಳಿಯಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಯಾಗುವುದಕ್ಕೆ ಅದೇ ನಾಂದಿಯಾಯಿತು.

ಸ್ವತಃ ನಮ್ಮ ಕುಟುಂಬದಲ್ಲೇ ಹಿಂದಿನವರೆಷ್ಟು ಜನ ಅಕ್ಷರಸ್ಥರು ಅಥವಾ ವಿದ್ಯಾವಂತರಾಗಿದ್ದರೆಂಬುದು ನನಗೆ ಗೊತ್ತಿಲ್ಲ. ನನ್ನ ತಂದೆಯವರು ಸ್ವಲ್ಪಮಟ್ಟಿಗೆ ವಿದ್ಯಾವಂತರಾಗಿ ಒಳ್ಳೆಯ ವ್ಯವಹಾರ ಜ್ಞಾನವಿದ್ದವರೆಂದು ಕೇಳಿದ್ದೆ. ನಂತರ ನನ್ನ ಚಿಕ್ಕಪ್ಪ ಸಣ್ಣ ಶಿದ್ದಪ್ಪಗೌಡರು ಸ್ವಲ್ಪಮಟ್ಟಿಗೆ ವಿದ್ಯೆ ಕಲಿತಿದ್ದರು. ಬೆಳಗಿನ ಜಾವಗಳಲ್ಲಿ ಅವರು ಹಾಡುತ್ತಿದ್ದ "ಏಳು ನಾರಾಯಣನೇ, ಏಳು ಲಕ್ಷ್ಮೀರಮಣ ಬೆಳಗಾಯಿತೋ" ಎಂದು ಮೊದಲಾದ 'ಉದಯರಾಗ'ಗಳನ್ನು ಹೇಳುತ್ತಿದ್ದನ್ನು ಕೇಳಿದ ನೆನಪಿದೆ. ಈಗಿನ "ಸುಪ್ರಭಾತ"ಗಳಿಗೇನೂ ಕಡಿಮೆಯಾದುದಲ್ಲ ಅದು. ಯಕ್ಷಗಾನದ ಪ್ರಸಂಗಗಳು, ದಾಸರ ಪದಗಳನ್ನೂ ಅರ್ಥಂಬರ್ಥವಾದರೂ ಆಗಾಗ್ಗೆ ಹಾಡಿಕೊಳ್ಳುತ್ತಿದ್ದರು.

ಇಂತಹ ಪರಿಸರವೊಂದರಲ್ಲಿ ನನಗೆ ವಿದ್ಯೆ ಕಲಿಸಬೇಕೆಂಬ ಗೀಳು ನನ್ನ ತಾಯಿಗೆ ಹೇಗೆ ಹಿಡಿಯಿತೆಂಬುದು ಆಶ್ಚರ್ಯವಾಗುತ್ತದೆ. ಬಹುಶಃ ಆಕೆಯ ತವರು ಮಾನಿ (ಈಗ ವಾರಾಹಿ ಜಲವಿದ್ಯುತ್ ಯೋಜನೆಯ ಪ್ರಧಾನ ಅಣೆಕಟ್ಟಿರುವ ಮಾನಿ ಡ್ಯಾಮ್ ಇರುವ ಊರು ; ಅದು 'ಮಾಣಿ'ಯಲ್ಲ ಈಗ ಸರ್ಕಾರಿ ದಾಖಲೆಗಳಲ್ಲಿ ಕಾಣಿಸುವಂತೆ !) ಕೆಲವರು ವಿದ್ಯಾವಂತರಿದ್ದುದು ಆಕೆಗೆ ಪ್ರೇರೇಪಣೆ ನೀಡಿರಬೇಕು. ಸಾಗರ, ಕಳೂರು ಕಟ್ಟೆ ಮುಂತಾದ ಕಡೆಯ ಕೋರ್ಟು ಕಛೇರಿಗಳಿಗೆ ಹೋಗಿ ಬರುವಷ್ಟು ಮುಂದುವರಿದಿದ್ದರಂತೆ. ಅವರ ಮನೆಯಲ್ಲಿ "ಯವನ ಯಾಮಿನೀ ವಿನೋದಗಳು" (?ಅರೇಬಿಯಾ ನೈಟ್ಸ್) ಸಾವಿರಕ್ಕಿಂತಲೂ ಹೆಚ್ಚು ಪುಟಗಳಿದ್ದ ಬೃಹತ್ ಪುಸ್ತಕವಿತ್ತು. ನಾನು ವಿದ್ಯೆ ಕಲಿತ ಹೊಸರದರಲ್ಲಿ ಮಾನಿಗೆ ಹೋದಾಗಲೆಲ್ಲಾ ಅದನ್ನು ಓದುತ್ತಿದ್ದೆ. ಸಾಕಷ್ಟು ವಿದ್ಯಾವಂತರಾಗಿದ್ದ ಹಣ್ಣು ಹಣ್ಣು ಮುದುಕರೊಬ್ಬರನ್ನು ಚಿಕ್ಕವನಾಗಿದ್ದಾಗ ನೋಡಿದ ನೆನಪಿದೆ.

ನನ್ನನ್ನು ವಿದ್ಯಾವಂತನನ್ನಾಗಿ ಮಾಡುವ ಹಂಬಲ ಅವ್ವನಿಗಿತ್ತಾದರೂ ಆಗಿನ ಪರಿಸ್ಥಿತಿಯಲ್ಲಿ ಹೇಗೆ ಎಂಬ ಪ್ರಶ್ನೆ ದುತ್ತೆಂದು ಎದಿರಾಗುತ್ತಿತ್ತು. ಶಾಲೆಗಳಿರುವ ದೂರದ ಊರುಗಳಿಗೆ ಕಳುಹಿಸಿ ನನ್ನಿಂದ ದೂರವಿರುವಷ್ಟು ಕಠಿಣ ಮನಸ್ಸು ಅವ್ವನಿಗೆ ಇರಲಿಲ್ಲ. ನಾನೂ ಸಹ ಅವಳನ್ನು ಒಂದು ಘಳಿಗೆಯೂ ಬಿಟ್ಟಿರಲಾರನೆಂಬುದೂ ಎಲ್ಲರಿಗೂ ಗೊತ್ತಿದ್ದ ವಿಷಯ. ಆದರೂ ಅವ್ವ ಅದ್ಹೇಗೋ ಆ ಬಗೆಗೆ ನಿರ್ಧಾರ ಮಾಡಿಬಿಟ್ಟಳು.

ಒಂದು ದಸರೆಯ ಸಮಯ. ಅಂದು ಸರಸ್ವತಿ ಪೂಜೆಯ ದಿನವೋ, ವಿಜಯದಶಮಿಯ ದಿನವೋ ನನಗೆ ಸರಿಯಾಗಿ ಜ್ಞಾಪಕವಿಲ್ಲ. ಮನೆಯ ಜಗುಲಿಯ ಮೇಲೆ ಮರಳಿನ ರಾಶಿ ಹಾಕಿ ಹರಡಿದರು. ಅವ್ವ ನನಗೆ ಸ್ನಾನ ಮಾಡಿಸಿ, ಮರಳನ್ನು ಹರಡಿದ್ದ ಜಾಗಕ್ಕೆ ದರದರನೆ ಎಳೆದು ತಂದಳು. ಅಕ್ಷರಾಭ್ಯಾಸವನ್ನು ಶುರು ಮಾಡಿಸುವುದಕ್ಕೆ ಬಿಳೀ ಅಣ್ಣಯ್ಯ - (ಸಣ್ಣ ಶಿದ್ದಪ್ಪಗೌಡರಿಗೆ ಮನೆಯಲ್ಲಿ ಕರೆಯುವ ಹೆಸರು) ಮೊದಲೇ ತಯಾರಾಗಿ ನಿಂತಿದ್ದರು. ಮರಳಿನ ಹತ್ತಿರ ನನ್ನನ್ನು ಕೂರಿಸಿ ಬಲಗೈ ತೋರು ಬೆರಳಿನಿಂದ ಬಿಳೀ ಅಣ್ಣಯ್ಯ ಅಕ್ಷರಗಳನ್ನು ಬರೆಸುವ ಚಲನೆ ಮಾಡಿಸಲಾರಂಭಿಸಿದರು. "ಓಂ, ಶ್ರೀ ಗಣಾಧಿ ಪತೇಯಯೇ ನಮಃ" ಎಂದು ಬಾಯಲ್ಲಿ ಹೇಳುತ್ತಾ ಕೈ ಬೆರಳನ್ನು ಮರಳಿನಲ್ಲಿ ಒತ್ತಿ ಒತ್ತಿ ಬರೆಸುತ್ತಿದ್ದರು. ಬೆರಳಿನ ತುದಿ ಅತಿಯಾದ ನೋವಾಗುತ್ತಿದ್ದರೂ ಅವರು ಬಿಡದೆ ಪದೇ ಪದೇ ಬರೆಸುತ್ತಲೇ ಇದ್ದುದು ಇನ್ನೂ ಜ್ಞಾಪಕವಿದೆ. ಸ್ವಲ್ಪ ಸಮಯದಲ್ಲೇ ನನ್ನ ರೋಧನಕ್ಕೆ ಮಣಿದು ಅವತ್ತಿನ ಪಾಠವನ್ನು ಮುಗಿಸಬೇಕಾಯಿತು. ಬಹುಶಃ ಅದೇ ನನ್ನ ಮೊದಲ ಮತ್ತು ಕಡೆಯ "ಓಂ ಶ್ರೀ..." ಆಯಿತೆನ್ನಿಸುತ್ತದೆ. ಮುಂದೆ ಪ್ರತಿದಿನ ನನ್ನನ್ನು ಮರಳಿನ ಎದುರಿಗೆ ಕೂರಿಸುವ ಪ್ರಯತ್ನಗಳಾಗುತ್ತಿದ್ದವು. ನಾನು ಅವ್ವನ ಕೈ ತಪ್ಪಿಸಿ ಕೊಂಡು ಮನೆ ಸುತ್ತಾ ಓಡಿಹೋಗುತ್ತಿದ್ದನಂತೆ. ಮುಂದೆ ದೊಡ್ಡವನಾಗಿ ವಿದ್ಯೆ ಕಲಿಯುವ ಗೀಳು ಹಿಡಿಸಿಕೊಂಡಾಗ ಕೆಲವರು ಅಂದಿನ ಪ್ರಸಂಗಗಳನ್ನು ಜ್ಞಾಪಿಸಿಕೊಂಡು ಗೇಲಿ ಮಾಡುತ್ತಿದ್ದರು!

## ಐಗಳ ಮಠ

ಆರಂಭದ ಪ್ರಯತ್ನ ಹೀಗೆ ವಿಫಲವಾದಾಗ ಅವ್ವ ಮತ್ತೊಂದು ಹುನ್ನಾರ ಹುಡುಕಿದಳು. ನಮ್ಮ ಮನೆಗೆ ಕೇವಲ ಒಂದೂವರೆ ಮೈಲಿಗಳ ದೂರದ ಐದೂರು ಎಂಬಲ್ಲಿ ನನ್ನ ತಾಯಿಯ ಅಕ್ಕ - ದೊಡ್ಡಮ್ಮ ಇದ್ದರು. ಅವರ ಮನೆಯಲ್ಲಿ ಕೆಲವು ದಿನಗಳ ಹಿಂದೆ ಒಂದು ಐಗಳ ಮಠ ಶುರುವಾಗಿತ್ತು. ಆಗಲೇ 8-10 ಹುಡುಗರು ಸೇರಿದ್ದರಂತೆ. ನನಗೆ ಓದು ಕಲಿಸಲು ನನ್ನವ್ವ ಪಡುತ್ತಿದ್ದ ಕಷ್ಟ ದೊಡ್ಡಮ್ಮನಿಗೂ ತಿಳಿದುದೇ ಆಗಿತ್ತು. ನನ್ನನ್ನು ಅಲ್ಲಿಗೇ ಕರೆದುಕೊಂಡು ಹೋಗಿ ಬಿಟ್ಟುಕೊಳ್ಳುವ ಅಭಿಲಾಷೆ ದೊಡ್ಡಮ್ಮನಿಗೆ. ನನ್ನ ಮೇಲೆ ಎಲ್ಲಿಲ್ಲದ ಅಕ್ಕರೆ ಬೇರೆ. ಅವ್ವನಿಗೂ ಇದು ಸರಿಯೆನಿಸಿತು. ಒಂದು ದಿನ ಬೆಳಗಿನ ಹೊತ್ತು ನನಗೆ ಯಾವುದೇ ಮುನ್ಸೂಚನೆ ನೀಡದೆ ಒಬ್ಬಿಬ್ಬರು ಓರಗೆಯ ಹೆಂಗಸರನ್ನು ಕೂಡಿಕೊಂಡು ಐದೂರಿಗೆ ಹೊರಟರು. ಅವರ ಮನೆ ತಲುಪುವಷ್ಟ ರಲ್ಲೇ ಉಪ್ಪರಿಗೆಯ ಮೇಲೆ ಐಗಳು ಪಾಠ ಮಾಡುತ್ತಿರುವ ಸುಳುಹು ನನಗೆ ತಿಳಿಯಿತು. ಹಳೇ ಸಂಬಂಧದ ಹೆಂಗೆಳೆಯರು ಸೇರಿದಾಗ ಕ್ಷೇಮ ಸಮಾಚಾರ, ಕಷ್ಟಸುಖಗಳ ಮಾತು ಕತೆಗಳಲ್ಲಿ ಅವರೆಲ್ಲಾ ತಲ್ಲೀನರಾಗಿಬಿಟ್ಟರು. ಇತರ ಓರಗೆಯ ಹುಡುಗರೊಂದಿಗೆ ಹೊರಗಡೆ ಆಡಿಕೊಂಡಿರು ಎಂದು ಕಳಿಸಿದರು. ಮಧ್ಯಾಹ್ನದ ಊಟವೂ ಆಯಿತು. ನನ್ನನ್ನು ಹೊರಗಡೆ

ಆಡಿಕೊಂಡಿರಲು ಮತ್ತೆ ಕಳುಹಿಸಿದರು. ಅಷ್ಟರಲ್ಲೇ ಅವರು ನಡೆಸುತ್ತಿದ್ದ ಹುನ್ನಾರ ನನಗೆ ತಿಳಿದುಬಿಟ್ಟಿತ್ತು. ನಾನು ಹೊರಗಡೆ ಆಡಿಕೊಂಡಿರುವಾಗ ಅವರು ಸದ್ದಿಲ್ಲದೆ ನನ್ನನ್ನು ಅಲ್ಲೇ ಬಿಟ್ಟು ಊರಿಗೆ ಹಿಂತಿರುಗುತ್ತಾರೆಂಬುದು ನನಗೆ ಹೊಳೆಯದಿರಲಿಲ್ಲ. ಜೊತೆಗೆ ಆಡುತ್ತಿದ್ದವರ ಕಣ್‌ತಪ್ಪಿಸಿ ನಾನಲ್ಲಿಂದ ಊರ ಕಡೆ ದಾರಿ ಹಿಡಿದೆ. ಐದೂರಿಗೆ ನಾವು ಬೆಳಿಗ್ಗೆ ಬಂದ ಗುಡ್ಡ ಬೆಟ್ಟಗಳ ಮೂಲಕ ಬರುವ ದಾರಿಯೊಂದಲ್ಲದೆ, ಗದ್ದೆ, ಕೋಗಿನಲ್ಲೇ ಸ್ವಲ್ಪ ಸುತ್ತಿ ಬಳಸಿ ಹೋಗುವ ಮತ್ತೊಂದು ದಾರಿಯೂ ಇತ್ತು. ಕೆಲವು ಸಲ ಅದರಲ್ಲಿ ತಿರುಗಾಡಿ, ಅದರ ಪರಿಚಯ ನನಗಿತ್ತು. ಐದೂರಿನಿಂದ ಓಟ ಕಿತ್ತವನು, ಮತ್ತೆ ನಿಂತದ್ದು ನಮ್ಮ ಮನೆಯ ಕಬ್ಬಿನ ಗದ್ದೆಯಲ್ಲಿ. ಅವ್ವ ಮತ್ತಿತರರು ಸಾಂಯತರ ಐದೂರಿನಿಂದ ಹಿಂತಿರುಗಿದಾಗ ಕಬ್ಬಿನ ಗದ್ದೆಯ ಬೇಲಿಯ ಮೇಲೆ ಕುಳಿತುಕೊಂಡು ಇತರ ಹುಡುಗರೊಡನೆ ಕಬ್ಬು ತಿನ್ನುತ್ತಾ ಕೂತಿದ್ದೆ! ಅವ್ವನ ಮನಸ್ಸಿಗೆ ಅದೆಷ್ಟು ಆಘಾತವಾಗಿರಬೇಡ. ನಾನು ಬೇಲಿಯಿಂದ ಕೆಳಗಿಳಿಯುವುದರೊಳಗೆ ಬಂದು ನನ್ನ ಕೈಹಿಡಿದು ನಿಲ್ಲಿಸಿ ಬಿಟ್ಟಳು. ಸಾಕಷ್ಟು ಬೈದಳು ; ಅಲ್ಲೇ ಇದ್ದ ಲಕ್ಕೀ ಗಿಡದ ಕೊಂಬೆಯನ್ನು ಕಿತ್ತು ನಾಲ್ಕಾರು ಸಾರಿ ಬಾರಿಸಿದಳು ; ಬಾರಿಸಿದ್ದು ನಿಧಾನವಾಗಿದ್ದು, ನನಗೆ ಅಂತಹ ಏಟೇನೂ ಆಗಿರಲಿಲ್ಲ!

ಮುಂದೇನು ಮಾಡಬೇಕೆಂಬುದು ಅವ್ವನಿಗೆ ಬಗೆಹರಿಯದ ಸಮಸ್ಯೆಯಾಗಿರಬೇಕು. ನಮ್ಮ ಹತ್ತಿರದ ಸಂಬಂಧಿಕರ ಮನೆ ಬೈಸೆ ತಮ್ಮಯ್ಯ ಗೌಡರ ಮನೆಯಲ್ಲಿ ಐಗಳ ಮಠವೊಂದು ಶುರುವಾಗಿರುವುದು ಅವ್ವನಿಗೆ ತಿಳಿಯಿತು. ಅಲ್ಲಿಯೂ ಒಂದು ಸಾರಿ ಪ್ರಯತ್ನ ಮಾಡುವ ಅಭಿಲಾಷೆ ಉಂಟಾಗಿರಬೇಕು. ಒಂದು ದಿನ ನೆಂಟರ ಮನೆಗೆ ಹೋಗಿ ಅಂದೇ ವಾಪಸಾಗುವ ಯೋಜನೆ ತಯಾರಾಯಿತು. ಅವ್ವ ಮತ್ತು ಅವರ ಅತ್ತಿಗೆಯ (ಮಾನಿ ಚಿನ್ನಮ್ಮನವರು, ನನ್ನ ಸೋದರತ್ತೆ ಹಾಗೂ ಬೈಸೆ ತಮ್ಮಯ್ಯ ಗೌಡರ ಹೆಂಡತಿಯ ಅಕ್ಕ) ಜೊತೆಗೆ ಬೈಸೆಗೆ ಹೋಗುವ ತಯಾರಿ ಮಾಡಿಕೊಂಡರು. ನನ್ನನ್ನೂ ಕರೆದುಕೊಂಡು ಹೋಗುವ ವಿಚಾರ ತಿಳಿದಾಗ ನಾನು ಮತ್ತೊಮ್ಮೆ ಗಾಬರಿಯಾದೆ ; ಹೊರಡಲು ನಿರಾಕರಿಸಿದೆ. ಆದರೂ ಏನೇನೋ ಆಮಿಷ ಒಡ್ಡಿ ಅವರ ಜೊತೆ ಹೋಗುವಂತೆ ಮಾಡಿದರು. ದಾರಿಯಲ್ಲಿ ಏನೇನೋ ರಗಳೆ ತೆಗೆದೆ. ಯಡೂರಲ್ಲಿ ಇರುವ ಅಜ್ಜಿಯೊಬ್ಬರನ್ನು ನೋಡಿಕೊಂಡು ಹೋಗಬೇಕೆಂದು ಹಠ ಹಿಡಿದೆ. ನಮ್ಮ ಹೊಳೆಯಾಚೆಯ ಬೆಲಗಣೆಯಲ್ಲಿದ್ದ ಒಬ್ಬ ಅಜ್ಜಿಯ ಮನೆಗೆ ಕರೆದುಕೊಂಡು ಹೋಗಿ ಅವರೇ ಯಡೂರ ಅಜ್ಜಿಯೆಂದು ತೋರಿಸಿ, ತಿಂಡಿ ಕೊಡಿಸಿ ಮತ್ತೆ ಮುಂದುವರಿದರು. ಮಧ್ಯಾಹ್ನದ ಊಟದ ಸಮಯಕ್ಕೆ ಬೈಸೆಯನ್ನು ಸೇರಿದ್ದಾಯಿತು. ಅವರ ಮನೆಯ ಮೆಟ್ಟಿಲು ಹತ್ತುವ ಎಡಭಾಗದಲ್ಲೇ ಒಂದು ಅಗಲವಾದ ಹಜಾರ. ಐಗಳು ಆಗಲೇ 15-20 ಹುಡುಗರನ್ನು ಸೇರಿಸಿಕೊಂಡು ಪಾಠ ಹೇಳುತ್ತಿದ್ದಾರೆ ! ಆ ದೃಶ್ಯ ನನ್ನ ಮತ್ತೆ ಗಲಿಬಿಲಿಯುಂಟುಮಾಡಿತು. ಅಲ್ಲಿ ಬಲಿಬಶುವಾಗುವುದರಲ್ಲಿ ಅನುಮಾನ ಉಳಿಯಲಿಲ್ಲ. ಅವರ ಮನೆಯಲ್ಲಿ ಕ್ಷೇಮ

ಸಮಾಚಾರ, ಊಟ ಉಪಚಾರಗಳಾದ ಮೇಲೆ, ಅವರಿಬ್ಬರೂ ವಾಪಸ್ ಊರಿಗೆ ಹೊರಡಲು ತಯಾರಾದರು. ನಾನು ಅಲ್ಲೇ ಇರುವಂತೆ ಬೈಸೆಯವರೆಲ್ಲಾ ನನಗೆ ಬುದ್ಧಿವಾದ ಹೇಳಿದರು. ನಾನು ಅವ್ವನ ಸೆರಗನ್ನು ಬಿಡಲೇ ಇಲ್ಲ. ಗಟ್ಟಿಯಾಗಿ ಅಳುತ್ತಾ ರೋಧನ ಮಾಡತೊಡಗಿದೆ. ತಮ್ಮಯ್ಯಗೌಡರು ನನ್ನನ್ನು ಅವ್ವನಿಂದ ಬಿಡಿಸಿ, ನನಗೆರಡು ಲತ್ತೆ ಹಾಕಿ ದರದರನೇ ಎಳೆದುಕೊಂಡು ಹೋಗಿ ಕೋಣೆಯೊಂದರೊಳಗೆ ತಳ್ಳಿದರು. ಹೊರಗಡೆಯಿಂದ ಬಾಗಿಲಿಗೆ ಚಿಲಕ ಹಾಕಿದರು. ನಾನು ಅದೆಷ್ಟು ಹೊತ್ತು ಅಳುತ್ತಿದ್ದೆನೋ ತಿಳಿಯದು. ಸಾಯಂಕಾಲ ಬಾಗಿಲು ತೆಗೆದಾಗ ನಿದ್ದೆ ಮಾಡುತ್ತಿದ್ದನಂತೆ !

ಬೈಸೆ ಐಗಳ ಮಠದಲ್ಲಿ ನನ್ನ ವಿದ್ಯಾಭ್ಯಾಸ ಕೆಲವೇ ತಿಂಗಳು ನಡೆದಿರಬೇಕು. ಬಹುಶಃ ಅಕ್ಷರ ಮಾಲೆಯನ್ನು ಕಲಿಯಲು ಸಾಧ್ಯವಾದ ನೆನಪು. ಮುಂದೊಂದುಸಾರಿ ರಜೆಗೆ ಊರಿಗೆ ಬಂದವನು ಮತ್ತೆ ಹಿಂದಿರುಗಲೇ ಇಲ್ಲ. ಅವ್ವನಿಗೆ ಮತ್ತೊಂದು ಯೋಜನೆ ಹಾಕುವ ಹಂಬಲವಾಯಿತು. ನಮ್ಮ ಮನೆಗೆ ಸುಮಾರು ಎರಡು ಮೈಲು ದೂರದಲ್ಲಿ ಮಕ್ರಿಕೊಪ್ಪ ಎಂಬ ಸಂಬಂಧಿಕರ ಮನೆ ಇತ್ತು. ಅಲ್ಲಿಂದ ನಮ್ಮ ಚಿಕ್ಕಪ್ಪನಿಗೆ ಒಂದು ಮದುವೆಯಾಗಿ ಕೆಲವು ವರ್ಷಗಳಾಗಿತ್ತು. ಅವರು ಹೆರಿಗೆ ಸಮಯದಲ್ಲಿ ತೀರಿಹೋಗಿದ್ದು, ಒಂದು ಹೆಣ್ಣು ಮಗು ಉಳಿದುಕೊಂಡಿತ್ತು. ಅವಳು ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದಳು. ಅವಳ ಹತ್ತಿರ ಚೆನ್ನಾಗಿ ಹೊಂದಿಕೊಂಡು ಆಟವಾಡುತ್ತಿದ್ದೆ. ಆ ನೆವದಿಂದ ಅವಳ ಜೊತೆ ಅಲ್ಲಿ ಇರಬಹುದೇನೋ ಎಂದು ನನ್ನನ್ನು ಮಕ್ರಿಕೊಪ್ಪದಲ್ಲಿ ಬಿಟ್ಟು ಬಂದಳು. ಅಲ್ಲಿಂದ ಬಹಳಷ್ಟು ಹುಡುಗರು ಯಡೂರಿನ ಶಾಲೆಗೆ ನಡೆದುಕೊಂಡು ಹೋಗುತ್ತಿದ್ದರು. ನಾನೂ ಅವರ ಜತೆಗೂಡಿ ಹೋಗಿಬರುತ್ತಿದ್ದೆ. ನನ್ನ ಅಜ್ಜಿಯ ಊರಾದ ಮಾನಿಗೆ ಹೋಗುವ ದಾರಿಯಲ್ಲೇ ಆ ಸ್ಕೂಲು ಇತ್ತು. ಮುಂದೆ ಬಹಳ ವರ್ಷಗಳವರೆಗೂ ಆ ಕಟ್ಟಡ ನಾನು ರಜಾ ದಿನಗಳಲ್ಲಿ ಮಾನಿಗೆ ಹೋಗುವಾಗ ಬಾಲ್ಯದ ದಿನಗಳನ್ನು ನೆನಪಿಗೆ ತರುತ್ತಿತ್ತು. ಹಾಗೆಯೇ ನಾನು ಯಡೂರಿನಲ್ಲಿ ಶಾಲೆಯಲ್ಲಿದ್ದಾಗ ಲಾರಿಯೊಂದು ಗಾಡಿ ಎತ್ತಿನ ಮೇಲೆ ಹರಿದು ಅಪಘಾತವಾದಾಗ ಅಲ್ಲಿ ಉಂಟಾದ ಗಲಾಟೆ, ಅದರ ಮೈಯಿಂದ ಹರಿದ ರಕ್ತದ ಕೋಡಿ ನೆನಪಾದಾಗ ಇಂದಿಗೂ ಮೈ ಜುಂ ಎನಿಸುತ್ತದೆ. ಮಕ್ರಿಕೊಪ್ಪದಲ್ಲಿದ್ದಾಗ ಅಂಕೆಗಳನ್ನು ಬರೆಯಲು ಕಲಿತದ್ದು ನೆನಪಿನಲ್ಲಿರುವ ಇನ್ನೊಂದು ಸಂಗತಿ. ಮನೆಯ ಯಜಮಾನರಾದ ದ್ಯಾವಪ್ಪ ನಾಯ್ಕರು ಸ್ವಲ್ಪ ವಿದ್ಯೆ ತಿಳಿದವರಾಗಿದ್ದರು. ಸ್ವಲ್ಪ ವಯಸ್ಸಾದ ಅವರ ಒಂದು ಕಾಲು ಊನವಾಗಿದ್ದು, ಕುಂಟುತ್ತಾ ನಡೆಯುತ್ತಿದ್ದರು. ಅಂಕೆಗಳ ಪಕ್ಕದಲ್ಲಿ ಮತ್ತೊಂದು ಸಂಖ್ಯೆಯನ್ನು ಸೇರಿಸುತ್ತಾ ಹೋಗುವುದರಿಂದ - 100ರ ವರೆಗೂ ಅವುಗಳನ್ನು ಸುಲಭವಾಗಿ ಕಲಿಯುವುದನ್ನು ಅವರು ಸ್ಲೇಟಿನಲ್ಲಿ ಬರೆದು ತೋರಿಸಿ ಅಭ್ಯಾಸ ಮಾಡಿಸಿದರು. 1ರ ಮುಂದೆ 0 ಸೇರಿಸಿದರೆ 10 ಆಗುವುದು. ಹಾಗೆ 2ರ ಮುಂದೆ 0, 2ರ ಮುಂದೆ 1, 2, 3 ಮುಂತಾದವನ್ನು ಸೇರಿಸಿದರೆ 21, 22, 23..... ಇತ್ಯಾದಿಯಾಗಿ ಅಂತಿಮವಾಗಿ 100ರ ವರೆಗೂ ಅಂಕೆಗಳನ್ನು ನಾನು ಕಲಿತದ್ದು ಅಲ್ಲಿಯೇ. ಅಲ್ಲಿಯ ಇನ್ನೊಂದು

ಜ್ಞಾಪಕವೆಂದರೆ ತುಂಬಾ ವಯಸ್ಸಾದ ಅಜ್ಜಿಯೊಬ್ಬರ ಬಾಯಿಯ ಹತ್ತಿರ ಹೊರಗಡೆ ಕೆಂಪ ಕೆಂಪನೆ ಸಣ್ಣ ನಿಂಬೇಹಣ್ಣಿನ ಗಾತ್ರದ ಗೆಡ್ಡೆ ಬಹಳ ಕಾಲ ನೇತಾಡುತ್ತಿದ್ದುದು ; ಅದರ ಪರಿಣಾಮವಾಗಿಯೇ ಅವರು ಸತ್ತಿದ್ದು. ಅದು ಕ್ಯಾನ್ಸರ್ ಗೆಡ್ಡೆಯಾಗಿರಬಹುದೆಂಬ ಅಂದಾಜು ನಾನು ಮೆಡಿಕಲ್ ಕಾಲೇಜಿನಲ್ಲಿದ್ದಾಗ ಸ್ಪಷ್ಟವಾಯಿತು.

ಇಷ್ಟರ ಸಮಯಕ್ಕೆ ನನಗೆ ಅಕ್ಷರ ಕಲಿಯುವುದರಲ್ಲಿ ಸ್ವಲ್ಪ ಆಸಕ್ತಿಯುಂಟಾಗಿತ್ತೆನ್ನು ವುದರಲ್ಲಿ ಸಂದೇಹವಿಲ್ಲ. ಆದರೆ ಮುಂದಿನ ಸಾರಿ ಬಹುಶಃ ಯಾವುದೋ ಸಲುವಾಗಿ ಊರಿಗೆ ಬಂದವನು ಮತ್ತೆ ಮಕ್ರಿಕೊಪ್ಪಕ್ಕೆ ಹಿಂದಿರುಗಲೇ ಇಲ್ಲ. ಅವ್ವನ ಬಿಟ್ಟಿರಲಾರದ ನನ್ನ ವ್ಯಾಮೋಹವೇ ಇದಕ್ಕೆ ಕಾರಣವೆನಿಸುತ್ತದೆ.

ನನ್ನಿಂದ ಅವ್ವನಿಗೆ ಇಷ್ಟೆಲ್ಲಾ ನಿರಾಶೆ ಮೇಲಿಂದ ಮೇಲಾಗುತ್ತಿದ್ದರೂ ನನ್ನನ್ನು ಓದಿಸಲೇಬೇಕೆಂಬ ಅಚಲ ನಿರ್ಧಾರ ಬದಲಾಗದಿದ್ದುದು ಅಚ್ಚರಿಯೆನಿಸುತ್ತದೆ. ಅವ ಳೊಬ್ಬ ಛಲಬಿಡದ ತ್ರಿವಿಕ್ರಮ ಅವತಾರವಾಗಿದ್ದಳು. ಸ್ವಲ್ಪ ಸಮಯದಲ್ಲೇ ಮತ್ತೊಂದು ಯೋಜನೆ ತಯಾರಾಯಿತು - ದೂರದ ಮೇಗರವಳ್ಳಿಯ ಸಂಬಂಧಿಕರ ಮನೆಯಲ್ಲಿ ಬಿಟ್ಟು ಓದಿಸುವುದು !

## ಸ್ಕೂಲಿನ ಗೀಳು

ನಮ್ಮೂರಿಂದ ಸುಮಾರು 6-7 ಮೈಲಿ ದೂರದಲ್ಲಿ ಮೇಗರವಳ್ಳಿ ಇದೆ. ತೀರ್ಥಹಳ್ಳಿ ಕಡೆಯಿಂದ ಆಗುಂಬೆಗೆ ಹೋಗುವ ರಸ್ತೆಯ ನಡುವೆ ಹಲವು ಅಂಗಡಿ ಮುಂಗಟ್ಟುಗಳಿ ರುವ, ಆ ಪ್ರದೇಶದ ಪ್ರಮುಖ ಊರು. ಆ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಬೊಂಬಾಯಿಗೆ ಹೋಗುತ್ತಿದ್ದವರು ಆಗುಂಬೆಗೆ ಬಂದು ತೀರ್ಥಹಳ್ಳಿಯ ಮೂಲಕ ಹರಿಹರಕ್ಕೆ ಹೋಗಿ ಅಲ್ಲಿ ರೈಲು ಹಿಡಿಯಬೇಕಾಗಿತ್ತು. ಹಾಗಾಗಿ ಮೇಗರವಳ್ಳಿಯಲ್ಲಿ ಬಸ್ಸುಗಳ ಓಡಾಟ ಸಾಕಷ್ಟಿತ್ತು. ಆದರೆ ನಮ್ಮೂರುಗಳಂತ ಹಳ್ಳಿಗಳಿಂದ ಅಲ್ಲಿಗೆ ನಡೆದುಕೊಂಡು ಹೋಗುವುದೊಂದೇ ಮಾರ್ಗ. ಸಾಲು ಸಾಲಾಗಿರುವ ಗದ್ದೆ ಕೋಗುಗಳು, ಮುಂದೆ ಹುರುಳಿ ಕೊಡಿಗೆ ಎಂಬಲ್ಲಿಂದ ದಟ್ಟವಾದ ಕಾಡು ಹಾದಿ, ಆನಂತರ ಸ್ವಲ್ಪ ದೂರ ಬಯಲು ದಾರಿಗಳನ್ನು ಸಾಗಿ ಹೋದರೆ ಮೇಗರವಳ್ಳಿ ಸಿಗುತ್ತಿತ್ತು. ಸುಮಾರು ಅರ್ಧ ದಿನದಷ್ಟು ಕಾಲು ನಡಿಗೆಯ ಪ್ರಯಾಣ.

ಮೇಗರವಳ್ಳಿಯ ಪೇಟೆಯಲ್ಲಿ ಹಲವಾರು ಅಂಗಡಿ, ಹೋಟೆಲು, ಸ್ಕೂಲುಗಳಿದ್ದರೆ, ಅದರ ಹಿಂಭಾಗದಲ್ಲಿ ಹೆಗ್ಗಡೇರ ಕೇರಿ ಎಂಬ ಬಡಾವಣೆ ಇದೆ. ನಮ್ಮವರೇ ಆದ ಒಂದು ಗುಂಪು ಹೆಗ್ಗಡೆಯವರೆಂದು ಹೇಳಲಾಗುವ ಒಂದು ಕವಲು. ಅವರಲ್ಲಿ ಬಹುಪಾಲು ಜಮೀನುದಾರರು. ಜೊತೆಗೆ ಅಡಿಕೆ ವ್ಯಾಪಾರ, ಹಣಕಾಸಿನ ಲೇವಾದೇವಿ ವ್ಯವಹಾರವನ್ನು ಮಾಡಿಕೊಂಡು ಒಳ್ಳೆಯ ಸ್ಥಿತವಂತರಾಗಿದ್ದವರು. ಅವರ ಪೈಕಿ ಸಂ. ಲಿಂಗಪ್ಪ ಹೆಗ್ಗಡೆಯವರ

ಕುಟುಂಬದವರು ನಮಗೆ ದೂರದ ಸಂಬಂಧ. ಅವರ ಮನೆಯಲ್ಲಿ ನನಗೊಬ್ಬ ಅಜ್ಜಿ ಇದ್ದರು. ಬಹುಶಃ ರಾಮಮ್ಮ ಎಂಬುದು ಅವರ ಹೆಸರೆಂದು ಜ್ಞಾಪಕ. ನನ್ನ ತಂದೆಯ ತಾಯಿಯ ತಂಗಿಯಾದ ಅವರು ಸಹಾ ಬಾಲ ವಿಧವೆಯಾಗಿದ್ದರು. ನಾನು ನೋಡುವಾಗ ಅವರು ತೀರಾ ವಯಸ್ಸಾದ ಮುದುಕಿಯಾಗಿಬಿಟ್ಟಿದ್ದರು. ನನ್ನವ್ವ ಈ ಸಂಬಂಧವನ್ನು ಹುಡುಕಿ ನನ್ನನ್ನು ಅವರ ಹತ್ತಿರ ಬಿಡುವ ಯೋಚನೆ ಮಾಡಿರಬೇಕು. ಈ ಬಗೆಗೆ ಅವರ ಹತ್ತಿರ ಮಾತುಕತೆ ನಡೆಸಿದ್ದರೋ ಏನೋ ನನಗೆ ತಿಳಿಯದು.

ನನಗೆ ಸುಮಾರು 5-6 ವರ್ಷಗಳಾಗಿರಬಹುದು. ಒಂದು ದಿನ ಯಾವುದೋ ನೆಂಟರ ಮನೆಗೆ ಹೋಗುವ ನೆಪದಲ್ಲಿ ಅವರ ಅತ್ತಿಗೆ ಮಾನಿ ಚಿನ್ನಮ್ಮನವರೊಡಗೂಡಿ ಮೇಗರವಳ್ಳಿಗೆ ಹೊರಟೆವು. ಅಷ್ಟು ದೂರ ನಾನೆಂದೂ ನಡೆದವನಲ್ಲ. ಅಲ್ಲಲ್ಲೇ ನೆರಳಿನಲ್ಲಿ ಕುಳಿತು ದಣಿವಾರಿಸಿಕೊಳ್ಳುತ್ತಾ, ಸಾಯಂಕಾಲದ ಹೊತ್ತಿಗೆ ಮೇಗರವಳ್ಳಿಯನ್ನು ತಲ್ಪಿದೆವು. ಅಂದು ಮನೆಯಲ್ಲೇ ಇದ್ದ ಮುದುಕರಾಗಿದ್ದ ಲಿಂಗಪ್ಪ ಹೆಗ್ಗಡೆಯವರನ್ನೂ ನೋಡಿ ನನಗೆ ಅವರಲ್ಲಿ ಗೌರವ ಭಕ್ತಿಯುಂಟಾಯಿತು. ಅಂತೆಯೇ ಅವರ ಹಿರಿಯ ಮಗ ಅಪ್ಪಣ್ಣ ಹೆಗ್ಗಡೆಯವರೂ ಸಹಾ ಗಂಭೀರ ಪ್ರವೃತ್ತಿಯವರಂತೆ ಕಂಡರು. ಅವರ ಇನ್ನಿಬ್ಬರು ತಮ್ಮಂದಿರು ನನಗಿಂತ ಸ್ವಲ್ಪ ವರ್ಷಗಳ ದೊಡ್ಡವರಾಗಿದ್ದಿರಬಹುದು. ಅವರೆಲ್ಲಾ ಆಗಲೇ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಜೊತೆಗೆ ಅವರ ಇತರ ಸಂಬಂಧಿಕರ ಕೆಲವು ಹುಡುಗರೂ ಅಲ್ಲಿ ಓದುವ ಸಲುವಾಗಿ ಮೊದಲೇ ಇದ್ದರು. ಅಂತೂ ಅಲ್ಲೊಂದು ಶಾಲೆಯ ವಾತಾವರಣ ಇತ್ತು. ಅವ್ವ ಮುಂದೆ ಒಂದೆರಡು ದಿನ ಅಲ್ಲಿದ್ದರು. ನನ್ನನ್ನು ಮರುದಿನವೇ ಪ್ರೈಮರಿ ಸ್ಕೂಲಿಗೆ ಸೇರಿಸುವ ಏರ್ಪಾಡಾಯಿತು. ಅಂದಿನಿಂದ ನನ್ನ ಓದಿನ ದಾರಿ ಸುಗಮವಾಯಿತು. ನಾನೆಂದೂ ಮತ್ತೆ ಹಿಂದಿರುಗಿ ನೋಡಲಿಲ್ಲ. ಅಲ್ಲಿಯ ಪ್ರೈಮರಿ ಮತ್ತು ಮಿಡ್ಲ್ ಸ್ಕೂಲ್‌ಗಳಲ್ಲಿ ಸತತವಾಗಿ ಎಂಟು ವರ್ಷ ನನ್ನ ವಿದ್ಯಾಭ್ಯಾಸ ಸಾಗಿತ್ತು. ಬಹುತೇಕ ತರಗತಿಗಳಲ್ಲಿ ಬುದ್ಧಿವಂತನೆನಿಸಿಕೊಂಡಿದ್ದೆ. ಪ್ರೈಮರಿ ನಾಲ್ಕನೇ ತರಗತಿಯಲ್ಲಿ ಒಟ್ಟು 144 ಅಂಕಗಳನ್ನು ಗಳಿಸಿ ತರಗತಿಗೇ ಮೊದಲ ಸ್ಥಾನದಲ್ಲಿದ್ದೆ. ಆ ಶಾಲೆಯಿಂದ ಮಿಡ್ಲ್ ಸ್ಕೂಲಿಗೆ ಹೋಗುವ ದಿನ ನನ್ನ ಅಚ್ಚುಮೆಚ್ಚಿನ ಉಪಾಧ್ಯಾಯರಾದ ಮಂಜಭಟ್ಟರ ಕಾಲಿಗೆ ಬಿದ್ದಾಗ "ನಿನಗೆ ಒಳ್ಳೆಯ ಭವಿಷ್ಯವಿದೆ, ಒಳ್ಳೆಯದಾಗಲಿ" ಎಂದಾಗ ನಾನು ಆನಂದಪರವಶನಾಗಿ ಕಣ್ಣೀರು ಹರಿಸಿದ್ದು ಇನ್ನೂ ಜ್ಞಾಪಕವಿದೆ. ಮುಂದೆ ಮಿಡ್ಲ್ ಸ್ಕೂಲ್‌ನಲ್ಲಿ ಅಂತಿಮ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಕುಳಿತ ಆರು ಜನರಲ್ಲಿ ಮೊದಲ ಪ್ರಯತ್ನದಲ್ಲೇ ತೇರ್ಗಡೆಯಾಗಿದ್ದ ಇಬ್ಬರಲ್ಲಿ ನಾನೊಬ್ಬ! ಇನ್ನೊಬ್ಬ ಹೆಡ್ಮಾಸ್ಟರ ಮಗ ನಾಗರಾಜ್.

# ಹಕ್ಕಿ ಶಿಕಾರಿಯ ಪರಿ

ಮೇಗರವಳ್ಳಿಯ ಶಾಲೆಗೆ ಸೇರಿದ ನಂತರ ನಮ್ಮೂರ ಸಂಪರ್ಕ ರಜಾ ದಿನಗಳಲ್ಲಿ ಮಾತ್ರ ಸಾಧ್ಯವಾಗುತ್ತಿತ್ತು. ದಸರಾ, ಕ್ರಿಸ್‌ಮಸ್ ಮತ್ತು ಬೇಸಿಗೆ ರಜಾಗಳು ಶುರುವಾಗುತ್ತಿದ್ದಂತೆಯೇ ಹೇಗೋ ಊರನ್ನು ತಲ್ಪುತ್ತಿದ್ದೆ. ಬೆಟ್ಟಗುಡ್ಡಗಳನ್ನು ಹತ್ತಿ, ಕಾಡು ಹಣ್ಣುಗಳನ್ನು ಕಿತ್ತು ತಿನ್ನುವುದು, ಹೊಳೆಯಲ್ಲಿ ಡುಮುಕಿ ಹೊಡೆದು ಈಜುವುದು, ಹಕ್ಕಿಪಕ್ಷಿಗಳನ್ನು ಹಿಡಿಯುವುದು, ಅಪ್ಪನ ತವರುಮನೆ ಮಾನಿ, ಇಲ್ಲವೇ ಮತ್ತಿತರ ಸಂಬಂಧಿಕರ ಮನೆಗಳಲ್ಲಿ ಕಾಲ ಕಳೆಯುವುದರಲ್ಲೇ ರಜಾ ದಿನಗಳು ಮುಗಿದು ಹೋಗಿಬಿಡುತ್ತಿದ್ದವು.

ಆ ದಿನಗಳಲ್ಲಿ ನನ್ನ ಆಟೋಟಗಳಲ್ಲಿ ಭಾಗಿಯಾಗುತ್ತಿದ್ದವರೆಂದರೆ, ನನಗೆ 2-3 ವರ್ಷಗಳಷ್ಟು ಹಿರಿದಾದ ಹಾಗೂ ನನಗೆ ಚಿಕ್ಕಪ್ಪನಾಗಿದ್ದ ಪುಟ್ಟಯ್ಯ ಮತ್ತು ವಿಜಾತಿಯವರಾದ ದೀವರು, ಹೊಲೆಯರ ಹುಡುಗರು (ಆಗ ಬಳಕೆಯಲ್ಲಿದ್ದ ಜಾತಿಯ ಹೆಸರುಗಳನ್ನು ಬಳಸಬೇಕಾದುದಕ್ಕೆ ಕ್ಷಮೆಯಿರಲಿ). ನನ್ನ ಬರುವಿಗಾಗಿಯೇ ಕಾದು ಕುಳಿತಿರುತ್ತಿದ್ದ ತುಂಬಾ ಆತ್ಮೀಯರು ಅವರೆಲ್ಲಾ. ನಮ್ಮ ಹೊರಗಡೆ ತಿರುಗಾಟಗಳಲ್ಲಿ ನಮಗಾವ ಜಾತಿ ಭೇದಗಳೂ ಇರುತ್ತಿರಲಿಲ್ಲ. ಎಷ್ಟೋ ಸಾರಿ ಹೊಲೆಯರ ಗುಡಿಸಲುಗಳ ಒಳಗೆ ಅವರೊಡನೆ ಆಟವಾಡಿ ಬರುತ್ತಿದ್ದೆ. ಮನೆಯವರಿಗೆ ಇದು ಗೊತ್ತಾದಾಗ ಬಯ್ಯುತ್ತಿದ್ದರಷ್ಟೆ. ವರುಷಗಳು ಉರುಳಿದಂತೆಲ್ಲಾ ಜಾತಿಭೇದಗಳು ಮಾಯವಾಗುತ್ತಿರುವುದು ಅವರ ಗಮನಕ್ಕೂ ಬರುತ್ತಿದ್ದು, ಆ ಬಗೆಗೆ ಟೀಕೆ ಮಾಡುತ್ತಿರಲಿಲ್ಲ.

ನಮ್ಮ ಮನೆಯಲ್ಲಿ ಹಲವು ನಿಷ್ಣಾತ ಬಂದೂಕು ದಾರಿ ಶಿಕಾರಿ ಮಾಡು ವವರಿರುತ್ತಿದ್ದರೂ ನಮಗೆ ಅವರ ಶಿಕಾರಿಯ ಪ್ರತಿಫಲದಲ್ಲಿ ಮಾತ್ರ ಆಸಕ್ತಿ ಇರುತ್ತಿತ್ತೇ ವಿನಹ, ಶಿಕಾರಿಯಲ್ಲಿ ನಮ್ಮ ಪಾತ್ರವೇನೂ ಇರುತ್ತಿರಲಿಲ್ಲ. ನನ್ನಂತೂ ಬಂದೂಕು ಇರುವ ಕಡೆ ಸುಳಿಯಲು ಅಪ್ಪ ಬಿಡುತ್ತಿರಲಿಲ್ಲ! ನಮ್ಮ ಕಪಿಸೈನ್ಯದ ಶಿಕಾರಿಯ ರೀತಿನೀತಿಗಳೇ ಬೇರೆಯಾಗಿರುತ್ತಿದ್ದವು. ನಮ್ಮ ಗಮನವೆಲ್ಲಾ ಹಕ್ಕಿಪಕ್ಷಿಗಳನ್ನು ಹಿಡಿಯುವುದರ ಮೇಲೆ ಇರುತ್ತಿತ್ತು. ಆ ಉದ್ದೇಶಕ್ಕಾಗಿ ನಾವು ಬಳಸುತ್ತಿದ್ದ ವಿಧಾನಗಳು ತುಂಬಾ ಕುತೂಹಲ ಕಾರಿಯೆನಿಸಬಹುದು.

## ಪಿಕಳಾರ

ನಮಗೆ ಸುಲಭವಾಗಿ ಸಿಗುತ್ತಿದ್ದ ಹಕ್ಕಿಯೆಂದರೆ ಪಿಕಳಾರ ಅಥವಾ ಕಳ್ಳೀಪೀರ ಎಂಬ ಪುಟ್ಟ ಪಕ್ಷಿ. ಬಹುಪಾಲು ಹಸಿರಾಗಿದ್ದು ತುಂಬಾ ಸುಂದರವಾಗಿರುತ್ತಿತ್ತು. ಗದ್ದೆ ಕೊಯಿಲು ಮುಗಿದ ನಂತರ ಬಿದ್ದಿರುವ ಭತ್ತದ ಕಾಳುಗಳನ್ನು ಹೆಕ್ಕಿ ತಿನ್ನಲು ಅಲ್ಲಿ ಹಾರಾಡುತ್ತಿರುತ್ತಿದ್ದವು. ವಿವಿಧ ವಿನ್ಯಾಸಗಳಿಂದ ಅವು ಹಾರಾಡುತ್ತಿರುವುದನ್ನು ನೋಡುವುದೇ ಒಂದು ಆನಂದ. ಗದ್ದೆಯ ಅಂಚುಗಳಲ್ಲಿರುವ ಸಣ್ಣ ಪೊದೆಗಳ ಮೇಲೆ ಸ್ವಲ್ಪ ಸಮಯ ಕುಳಿತಿದ್ದು ಮತ್ತೆ ಹಾರಾಡಿ ಗದ್ದೆಗೆ ಧುಮಕಿ ಬತ್ತದ ಕಾಳುಗಳನ್ನು ಹೆಕ್ಕುತ್ತವೆ. ಗದ್ದೆಗಳ ಹತ್ತಿರದಲ್ಲೇ ಸಿಗುವ ಒಂದು ಜಾತಿ ಅಂಟು ಒಸರಿಸುವ ಕಾಯಿಗಳನ್ನು ಸುಲಿದರೆ ಅಂಟು ಹೊರಬರುತ್ತದೆ. ಅದನ್ನು ಸಣ್ಣ ಸಣ್ಣ ಕಡ್ಡಿಗಳಿಗೆ ಸವರಿ ಅವು ಸಾಮಾನ್ಯವಾಗಿ ಕುಳಿತು ಕೊಳ್ಳುವ ಗಿಡ ಅಥವಾ ಪೊದೆಗಳ ಮೇಲೆ ಇರಿಸುತ್ತಿದ್ದೆವು. ಒಂದಲ್ಲ ಒಂದು ಪಿಕಳಾರ ಅಂತಹ ಕಡ್ಡಿಗಳಿರುವ ಕಡೆ ಸರ್ವೇಸಾಮಾನ್ಯವಾಗಿ ಕುಳಿತುಬಿಡುತ್ತದೆ. ಕಡ್ಡಿಗೆ ಬಳಿದಿದ್ದ ಅಂಟು ಅದರ ರೆಕ್ಕೆಪುಕ್ಕಗಳಿಗೆ ಅಂಟಿಕೊಂಡು ಹಾರಲಾರದೆ ಕೆಳಗೆ ಬಿದ್ದು ಬಿಡುತ್ತವೆ. ಕೂಡಲೇ ನಾವು ಅಲ್ಲಿಗೆ ಧಾವಿಸಿ ಅದನ್ನು ಹಿಡಿದುಕೊಂಡು ಸಾಯಿಸಿಬಿಡುತ್ತಿದ್ದೆವು. ಹಾಗೆ ಬೆಳಗಿನಿಂದ ಮಧ್ಯಾಹ್ನದವರೆಗೆ ಈ ಕಾರ್ಯಕ್ರಮ ಜರುಗಿಸಿದರೆ 5-6 ಹಕ್ಕಿಗಳು ಸಿಗು ವುದರಲ್ಲಿ ಸಂದೇಹವಿರುತ್ತಿರಲಿಲ್ಲ. ಅಂದಿನ ನಮ್ಮ ಊಟದ ವ್ಯಂಜನಕ್ಕೆ ಸಾಕಾಗುತ್ತಿದ್ದವು.

ಈ ಪಿಕಳಾರ ಮತ್ತು ಅವುಗಳ ಮೊಟ್ಟೆಗಳನ್ನು ಇನ್ನೊಂದು ವಿಧಾನದಲ್ಲೂ ಶೇಖರಿಸುತ್ತಿದ್ದೆವು. ನಮ್ಮ ಊರಿನ ಉದ್ದಕ್ಕೆ ಹೊಳೆ ಹರಿಯುತ್ತದೆಯಷ್ಟೆ. ಅದರ ಎರಡೂ ಭಾಗದ ದಂಡೆಯ ಧರೆಗಳಲ್ಲಿ ಈ ಪಕ್ಷಿಗಳು ಕೊರೆದು ತೂತು ಮಾಡುತ್ತವೆ. ಅದು ಅವುಗಳ ತಂಗುದಾಣ ಮತ್ತು ಮೊಟ್ಟೆ ಮರಿ ಮಾಡುವುದಕ್ಕೂ ಪ್ರಶಸ್ತವಾದ ಸ್ಥಳ. ಸಾಯಂಕಾಲವಾಗಿ ನಸುಕು ಬೆಳಕಿರುವಾಗ ನಮ್ಮ ಸೈನ್ಯ ಹೊಳೆದಂಡೆಗೆ ಹೋಗಿ ಅಲ್ಲಿರಬಹುದಾದ ಧರೆಯಲ್ಲಿನ ತೂತುಗಳನ್ನು ಪತ್ತೇಹಚ್ಚುತ್ತಿದ್ದೆವು. ಅವುಗಳ ಒಳಗೆ ಕೈಹಾಕಿ ಹುಡುಕಿದರೆ ಹಕ್ಕಿಯೇ ಸಿಗಬಹುದು ; ಇಲ್ಲವಾದರೆ 3-4 ಮೊಟ್ಟೆಗಳಾದರೂ ಸಿಗಬಹುದು. ಹೀಗೆ 6-8 ತೂತುಗಳನ್ನು ಹುಡುಕಿದರೆ ಆ ದಿನದ ಊಟಕ್ಕೆ ಉಪಕಾರ ವಾಗುತ್ತಿತ್ತು. ಇಂತಹ ಅತಿಸುಂದರ ಪಕ್ಷಿಗಳನ್ನು ಅಂದಿನ ದಿನಗಳಲ್ಲಿ ಹಿಂಸಿಸುತ್ತಿದ್ದುದನ್ನು ಈಗ ನೆನೆದುಕೊಂಡರೆ ಮನಸ್ಸಿಗೆ ಖೇದ ಉಂಟಾಗುತ್ತದೆ. ಅವುಗಳನ್ನು ತಿನ್ನುವ ರುಚಿಗಿಂತಲೂ, ಅವುಗಳ ಬೇಟೆಯಲ್ಲಿ ನಾವು ಪಡೆಯುತ್ತಿದ್ದ ಆನಂದವೇ ಪ್ರಮುಖ ಆಕರ್ಷಣೆಯಾಗಿರುತ್ತಿತ್ತು.

ಗದ್ದೆ ಕೊಯಿಲು ಸಮಯ - ಡಿಸೆಂಬರ್, ಜನವರಿ. ನೀವು ಎಂದಾದರೂ ಮಲೆನಾಡಿನ ಮನೆಯೊಂದರಲ್ಲಿ ತಂಗುವ ಅವಕಾಶ ಇದ್ದರೆ ಹತ್ತಿರದ ಕಾಡಿನ ಕಡೆಯಿಂದ, ಬೆಳಗಾಗುವಷ್ಟರಲ್ಲೇ ಒಂದು ವಿಶಿಷ್ಟ ರೀತಿಯ ಹಕ್ಕಿಯ ಕೇಕೇಯ ಕೂಗು ಕೇಳಿಬರುತ್ತದೆ;

ಅದು ಕಾಡುಕೋಳಿಗಳದ್ದು. ಹಾಗೆಯೇ ಮಲೆನಾಡಿನ ನಡುವೆ ಹಾದು ಹೋಗುವ ರಸ್ತೆಗಳಲ್ಲಿ ನೀವು ಕಾರು, ಬಸ್ಸುಗಳಲ್ಲಿ ಪ್ರಯಾಣಿಸುತ್ತಿದ್ದಾಗಲೂ ಈ ಕಾಡುಕೋಳಿಗಳು ರಸ್ತೆಯಲ್ಲಿ ಬಿದ್ದಿರಬಹುದಾದ ಕಾಳುಗಳನ್ನು ಹೆಕ್ಕುವ ಸಾಮಾನ್ಯ ದೃಶ್ಯ ನಿಮ್ಮ ಅನುಭವಕ್ಕೆ ಬಂದಿರಬಹುದು. ನಮ್ಮ ಊರು ಕೋಳಿಗಳಂತೆಯೇ ಇರುವ ಈ ಕಾಡುಕೋಳಿಗಳು ತುಂಬಾ ಸುಂದರವಾಗಿರುತ್ತವೆ. ಗಂಡುಕೋಳಿ (ಹುಂಜ)ಯ ತಲೆಯಿಂದ ಕುತ್ತಿಗೆಯ ಹಿಂದುಗಡೆಯ ಜಾಗದಲ್ಲಿ ಹೊಳೆಯುವ ಬಂಗಾರದ ಬಣ್ಣದ ಪುಕ್ಕದ ಗುಚ್ಛ ತುಂಬಾ ಆಕರ್ಷಣೀಯ. ಮಲೆನಾಡಿನ ಪ್ರತಿಯೊಬ್ಬರ ಮನೆಯ ಬಾಗಿಲುಗಳ ಇಕ್ಕೆಲಗಳಲ್ಲಿ ಇಂತಹ ಗುಚ್ಛಗಳು ಒಂದು ಕಾಲದಲ್ಲಿ ನೇತಾಡಿಕೊಂಡಿರುವುದು ಸಾಮಾನ್ಯ ದೃಶ್ಯವಾಗಿರುತ್ತಿತ್ತು.

## ಕಾಡುಕೋಳಿ ಶಿಕಾರಿ

ಕಾಡುಕೋಳಿಗಳು ಗದ್ದೆಗಳಲ್ಲಿ ಭತ್ತ ಹೆಕ್ಕುವುದಕ್ಕೆ ಬೆಳಗಿನ ಹೊತ್ತು ಬರುತ್ತವೆ. ಅವು ಬರುವ ಸಮಯ ಕೇಕೆ ಹಾಕಿ ತಮ್ಮ ಇರುವನ್ನು ಬಹಿರಂಗಪಡಿಸುವುದೇ ಅವಕ್ಕೆ ಕುತ್ತಾಗುತ್ತದೆ. ಊರುಕೋಳಿಗಳಿಗಿಲ್ಲದ ಇನ್ನೊಂದು ಗುಣವೆಂದರೆ ಬಹಳಷ್ಟು ಹಾರುವ ಸಾಮರ್ಥ್ಯ ಅವಕ್ಕಿರುವುದು. ಹೆಚ್ಚು ಎತ್ತರ ಅಥವಾ ಬಹಳ ದೂರ ಅವು ಹಾರಾಡಲಾರವಾದರೂ ಪೊದೆಗಳ ನಡುವೆ ಕುಪ್ಪಳಿಸಿ ಹಾರಿ ಅಡಗಿಕೊಳ್ಳಬಲ್ಲವು ; ಇಲ್ಲವೆ ಸಾಮಾನ್ಯ ಎತ್ತರದ ಮರದ ಮೇಲೆ ಹಾರಿ ಕುಳಿತುಕೊಳ್ಳಬಲ್ಲವು. ಈ ಕೋಳಿಗಳ ಕೇಕೆಯ ಕೂಗು ಕೇಳಿದಾಕ್ಷಣ ಮನೆಯಲ್ಲಿರುವ ಯಾರಾದರೂ ಈಡುಗಾರರು ಬಂದೂಕು ಹಿಡಿದು ಆ ದಿಕ್ಕಿನತ್ತ ಧಾವಿಸಿ ಓಡುತ್ತಾರೆ. ಅದಿರುವ ತಾಣವನ್ನು ಸಮೀಪಿಸಿ, ಎಲ್ಲಿ ಇರಬಹುದೆಂಬುದನ್ನು ಅತ್ಯಂತ ಜಾಗರೂಕತೆಯಿಂದ ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಅತ್ಯಂತ ನಿಧಾನಗತಿಯಿಂದ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ನಡೆಯುತ್ತಾ ಅದಕ್ಕೆ ಆದಷ್ಟು ಹತ್ತಿರದ ಜಾಗಕ್ಕೆ 'ಸಾರಿ' ಹೋಗುತ್ತಾರೆ. ಅದು ಗದ್ದೆಯಲ್ಲಿ ಭತ್ತ ಹೆಕ್ಕುತ್ತಿರಬಹುದು, ಇಲ್ಲವೆ ಮರದ ಮೇಲೆ ಕುಳಿತಿರಬಹುದು. ಅದಕ್ಕೆ ಗುರಿಯಾಗಿಟ್ಟು ಗುಂಡು ಹಾರಿಸುತ್ತಾರೆ. ನಮ್ಮವರಲ್ಲಿ ಬಹಳಷ್ಟು ನುರಿತ ಈಡುಗಾರರಾಗಿರುವುದರಿಂದ ಅವರ ಬಂದೂಕಿನ ಹೊಡೆತ ಕರಾರುವಾಕ್ಕಾಗಿ ಪಕ್ಷಿಗೆ ತಗುಲುವುದರಲ್ಲಿ ಸಂದೇಹವಿರುವುದಿಲ್ಲ. ದೂರದಿಂದ ಈಡು ಹಾರಿತೆಂದರೆ, ಆ ದಿನ ಒಂದು ಕಾಡು ಕೋಳಿ ಬಲಿಯಾಯಿತೆಂದೇ ಮನೆಯಲ್ಲಿದ್ದವರ ಆಶಾಭಾವನೆ.

ದೊಡ್ಡವರ ಕಾಡುಕೋಳಿಯ ಬೇಟೆ ಈ ರೀತಿಯದ್ದಾದರೆ ನಾವು ಹುಡುಗರೆಲ್ಲಾ ಸೇರಿ ಮಾಡುತ್ತಿದ್ದ ಬೇಟೆಯ ಪರಿಯೇ ಬೇರೆ. ಕಾಡುಕೋಳಿಗಳು ಗದ್ದೆ ಕೊಯಿಲಿನ ಶ್ರಾಯದಲ್ಲಿ ಸಾಮಾನ್ಯವಾಗಿ ಗದ್ದೆಗಳ ಹತ್ತಿರದ ತುಂಡು ಕಾನುಗಳ ಪೊದೆಗಳಲ್ಲಿ ಗೂಡು ಮಾಡಿಕೊಂಡು ವಾಸಿಸುತ್ತವೆ. ಪ್ರತಿದಿನ ಅಲ್ಲಿಂದ ಒಂದೇ ದಾರಿಯಲ್ಲಿ ಗದ್ದೆಗಳಿಗೆ ಜನರ

ಸುಳಿಹು ಇಲ್ಲದಿರುವಾಗ ನಡೆದುಕೊಂಡು ಹೋಗಿ ಭತ್ತ ಹೆರಕುವ ಅಭ್ಯಾಸ ಮಾಡಿಕೊಂಡಿರುತ್ತವೆ. ಇಂತಹ ತುಂಡು ಕಾನುಗಳಲ್ಲಿ ತಿರುಗಾಡುವ ದನಕಾಯುವ ಹುಡುಗರಿಗೋ ಅಥವಾ ಇತರ ಬೇಟೆಗಾರರಿಗೋ ಅವುಗಳ ತಾಣ ಗೊತ್ತಾಗುವುದು ಅಪರೂಪವೇನಲ್ಲ. ಮುಂದೆ ಒಂದೇ ದಾರಿಯಲ್ಲಿ ನಡೆದು ಹೋಗುವಂತೆ ಅಲ್ಲಿ ಅಕ್ಕಪಕ್ಕದ ಕಿಂಡಿಗಳನ್ನು ಸ್ವಾಭಾವಿಕವಾಗಿ ಸಿಕ್ಕುವ ಮರದ ಕಡ್ಡಿಕಸಗಳಿಂದ ಮುಚ್ಚುವ ಹಾಗೆ ಮಾಡಲಾಗುತ್ತದೆ. ಆ ರೀತಿಯಲ್ಲಿ ಮೋಸಗೊಳಿಸಿದ ದಾರಿಯಲ್ಲಿ ಅದು ಒಂದೆರಡು ದಿನ ನಡೆದಾಡಿದ್ದನ್ನು ಖಚಿತಪಡಿಸಿಕೊಳ್ಳಲಾಗುತ್ತದೆ. ನಂತರ ಆ ದಾರಿಯಲ್ಲಿ "ಕಣ್ಣಿ ಒಡ್ಡುವುದು" ಎಂಬ ತಂತ್ರವನ್ನು ಜಾರಿಗೊಳಿಸುತ್ತೇವೆ. ಬಿಲ್ಲಿನಂತೆ ಬಿರುಸಿನಿಂದ ಬಗ್ಗುವ ಒಂದು ಅತಿ ಸಣ್ಣ ಗಳುವನ್ನು ಹತ್ತಿರದಲ್ಲೇ ನೆಲದಲ್ಲಿ ಹುಗಿದು ಭದ್ರಪಡಿಸುತ್ತೇವೆ. ಅದರ ಒಂದು ತುದಿಗೆ ಸೆಣಬಿನ ನಾರಿನಿಂದ ಹುರಿ ಹೊಸೆದು ತಯಾರಿಸಿದ ಹಗ್ಗವನ್ನು ಕಟ್ಟಿ, ಅದರ ಇನ್ನೊಂದು ತುದಿಗೆ ಅಡ್ಡಲಾಗಿ ಇನ್ನೊಂದು ಉದ್ದನೆಯ ಕಡ್ಡಿಯ ಸೇರಿಸಿ ಕಟ್ಟಲಾಗುತ್ತದೆ. ಅದನ್ನು ನೆಲದ ಹತ್ತಿರ ಪಕ್ಷಿಯ ಕಾಲಿಗೆಟಕುವಂತೆ ಇರಿಸುವ ಏರ್ಪಾಡು ಮಾಡುವರು. ಹಾಗೆ ಮಾಡುವ ಮೊದಲು ಕಣ್ಣಿಯ (ಹಗ್ಗ) ನಡುವೆ ಒಂದು ಗಂಟು ಬೀಳಬಹುದಾದ ಸುರಳಿಯನ್ನು ಉಂಟುಮಾಡಿರುತ್ತಾರೆ. ಹಕ್ಕಿ ಆ ಉರುಳಿನೊಳಕ್ಕೆ ತನ್ನ ತಲೆ, ಕುತ್ತಿಗೆಯನ್ನು ಮುಂಚಾಚುವಾಗ ಉರುಳು ಬಿಗಿಯುವ ಹಾಗೆ ಆಗುತ್ತದೆ. ಮೊದಲೇ ಹೇಳಿದ ಕಡ್ಡಿಗೆ ಒಂದು ಭತ್ತದ ತೆನೆಯನ್ನು ಸಿಕ್ಕಿಸಿಟ್ಟಿರುತ್ತಾರೆ. ಕಾಡುಕೋಳಿ ಉರುಳಿನೊಳಗೆ ತನ್ನಕುತ್ತಿಗೆಯನ್ನು ತೂರಿಸಿ ತೆನೆಯನ್ನು ಎಳೆಯಲಾರಂಭಿಸಿದಾಗ ಬಿಲ್ಲು ಸಿಡಿದುಬಿಡುತ್ತದೆ. ಗಂಟು ಬೀಳುವಂತೆ ಏರ್ಪಡಿಸಿದ ಕಣ್ಣಿಯ ಉರುಳು ಅದರ ಕೊರಳಿನ ಸುತ್ತ ಬಿಗಿಯಾಗಿ ಹಿಡಿದುಕೊಂಡುಬಿಡುತ್ತದೆ. ಅದು ಒದ್ದಾಡಿದಷ್ಟೂ ಮತ್ತೂ ಬಿಗಿಯಾಗಿ ಗಂಟು ಬೀಳುತ್ತದೆ. ಕೆಲವೇ ನಿಮಿಷಗಳಲ್ಲಿ ಉಸಿರುಕಟ್ಟಿ ಸತ್ತು ನೇತಾಡುವಂತಾಗುತ್ತದೆ. ಸಾಮಾನ್ಯವಾಗಿ ಹಿಂದಿನ ದಿನ ಸಾಯಂಕಾಲ ಈ ರೀತಿ ಕಣ್ಣಿ ಒಡ್ಡಿಟ್ಟರೆ, ಕೋಳಿ ಬೆಳಿಗ್ಗೆ ಗದ್ದೆಗೆ ಹೋಗುವಾಗ ಅದರಲ್ಲಿ ಸಿಕ್ಕಿ ಹಾಕಿಕೊಳ್ಳುತ್ತದೆ. ಕ್ರಿಸ್‌ಮಸ್ ರಜೆಯಲ್ಲಿ ಊರಲ್ಲಿದ್ದಾಗ ಇತರ ಹುಡುಗರೊಡನೆ ಸೇರಿಕೊಂಡು ನಮ್ಮ ಮನೆಯ ಎದುರಿಗೆ ಇದ್ದ ತುಂಡ್ಹಾನಿನಲ್ಲಿ ಒಂದೆರಡು ಕಾಡು ಕೋಳಿಗಳನ್ನಾದರೂ ನಾವು ಈ ರೀತಿಯಲ್ಲಿ ಬೇಟೆಯಾಡುತ್ತಿದ್ದೆವು.

# ಶಿಕಾರಿಗಳ ವೈವಿಧ್ಯತೆ

ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಬಹುಪಾಲು ಯುವಕರು ಶಿಕಾರಿಯ ಅನುಭವ ಪಡೆದಿರುತ್ತಾರೆ. ಅವರಲ್ಲೆಲ್ಲಾ ನಾನೊಬ್ಬ ಅಪವಾದವಾಗಿದ್ದೆನೆಂದುಕೊಳ್ಳುವುದಕ್ಕೆ ಕೆಲ ಸಾರಿ ನಾಚಿಕೆಯಾಗುತ್ತದೆ. ಕಾರಣವಿಷ್ಟೆ : ನಮ್ಮ ಮನೆತನದಲ್ಲಿ ಅನೇಕರು ಶಿಕಾರಿಯಲ್ಲಿ ನಿಷ್ಣಾತರಿದ್ದರು. ನನ್ನ ತಂದೆಯವರೂ ಸಹ ತಮ್ಮ ಅಲ್ಪಕಾಲದ ಜೀವಮಾನದಲ್ಲಿ ಒಳ್ಳೆಯ ಈಡುಗಾರರಾಗಿದ್ದರಂತೆ. ಲೈಸೆನ್ಸ್ ಪಡೆದ ಬಂದೂಕು ಸಹಾ ಅವರಲ್ಲಿತ್ತು. ಅವರು ಗತಿಸಿದ ನಂತರ ಅದನ್ನು ನಮ್ಮ ಹರಿಜನ ಒಕ್ಕಲು ಒಬ್ಬನಿಗೆ ಬದಲಾಯಿಸಿದ್ದರು. ದೊಡ್ಡವನಾದ ಮೇಲೆ ಆ ಬಂದೂಕನ್ನು ನಾನು ವಾಪಸು ಪಡೆದುಕೊಳ್ಳಬೇಕೆಂದು ಆಗಾಗ್ಗೆ ಅವ್ವ ಹೇಳುತ್ತಿದ್ದಳು. ಆದರೆ ಬರುಬರುತ್ತಾ ಬಂದೂಕು ಪಡೆದುಕೊಳ್ಳುವುದಿರಲಿ, ಅದಿರುವವರ ಹತ್ತಿರ ಸುಳಿದಾಡಲೂ ಬಿಡುತ್ತಿರಲಿಲ್ಲ. ರಜಾ ದಿನಗಳಲ್ಲಿ ನನ್ನ ಓರಗೆಯ ಹುಡುಗರು ಶಿಕಾರಿಯ ತಂಡದವರೊಡನೆ ಕಾಡುಗಳಿಗೆ ಹೋಗುತ್ತಿದ್ದರೂ ನನಗೆ ಮಾತ್ರ ಆ ಸ್ವಾತಂತ್ರ್ಯ ಇರಲೇ ಇಲ್ಲ. ಅವ್ವನಿಗೆ ನನ್ನ ಮೇಲಿನ ಪ್ರೀತಿ, ನನಗೆ ಆಕೆಯ ಮೇಲಿನ ಅಕ್ಕರೆ, ಆದರಗಳಿಂದಾಗಿ ಒಂದು ರೀತಿಯ ಮೌನ ಸಮ್ಮತಿಯಾಗಿಬಿಡುತ್ತಿತ್ತು. ಹೀಗಾಗಿ ಶಿಕಾರಿಯ ಬಗೆಗೆ ನನ್ನಲ್ಲಿ ಆಸಕ್ತಿ ಉಂಟಾಗಲೇ ಇಲ್ಲ.

ಅಂದರೆ ಶಿಕಾರಿಯ ಬಗೆಗೆ ನನಗೆ ಕೆಟ್ಟ ಭಾವನೆ ಮೂಡಿತ್ತೆಂದು ಭಾವಿಸಬೇಡಿ. ರಜೆಯ ಸಮಯದಲ್ಲಿ ಊರಲ್ಲಿದ್ದಾಗ ನಡೆಯುತ್ತಿದ್ದ ಶಿಕಾರಿಗಳ ವೃತ್ತಾಂತ ಕೇಳಿ ರೋಮಾಂಚನಗೊಳ್ಳುತ್ತಿದ್ದೆ. ಅದಕ್ಕಿಂತ ಮಿಗಿಲಾಗಿ ಶಿಕಾರಿಗಳ ನಂತರದ ಪ್ರತಿಫಲಗಳನ್ನು ಅನುಭೋಗಿಸುವಲ್ಲಿ ಕಾರ್ಯಕ್ರಮಗಳ ಮುಂಚೂಣಿಯಲ್ಲಿರುತ್ತಿದ್ದನೆಂದರೆ ಸಾಕಲ್ಲವೇ !

## ಸಾರೀಕಿ ಬೇಟೆ

ಸಾಮಾನ್ಯವಾಗಿ ಡಿಸೆಂಬರ್-ಜನವರಿ ತಿಂಗಳುಗಳಲ್ಲಿ ಭತ್ತದ ಪೈರು ಕಟಾವಿಗೆ ಬರುತ್ತದೆ. ಆ ಸಮಯದಲ್ಲಿ ಕಾಡು ಪ್ರಾಣಿಗಳು ಗದ್ದೆಗಳಿಗೆ ನುಗ್ಗಿ ಪೈರುಗಳನ್ನು ಹಾಳು ಮಾಡುತ್ತವೆ. ಕಾಡು ಹಂದಿ, ಕಾಡು ಕುರಿ, ಬರ್ಕ ಮುಂತಾದವು ನಮ್ಮ ಕಾಡುಗಳಲ್ಲಿ ಯಥೇಚ್ಛವಾಗಿದ್ದ ಕಾಲವದು. ಅವುಗಳ ಉಪಟಳವನ್ನು ನಿಯಂತ್ರಿಸುವುದಕ್ಕೆ (ಮತ್ತೆ ಬಾಯಿ ರುಚಿಯ ಚಪಲಕ್ಕೂ ಅಂದುಕೊಳ್ಳಬಹುದು) ನಾನಾ ವಿಧದ ಬೇಟೆಗಳನ್ನು ನಮ್ಮವರು ಕೈಗೊಳ್ಳುತ್ತಿದ್ದರು. ಇಂತಹ ಪ್ರಾಣಿಗಳು ಸಾಮಾನ್ಯವಾಗಿ ಆಹಾರ ವಸ್ತುಗಳಿಗಾಗಿ

ತಿರುಗಾಡುವ ದಾರಿ, ಹಣ್ಣಿನ ಮರಗಳಿರುವತ್ತಿರು ತಾಣ ಮುಂತಾದೆಡೆಗಳಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುತ್ತವೆ. ಕೆಲವರು ಒಬ್ಬಂಟಿಯಾಗಿ ಬಂದೂಕನ್ನು ಹೆಗಲ ಮೇಲೆ ಹೊತ್ತುಕೊಂಡು ಆ ಜಾಗಗಳಿಗೆ ಸದ್ದಿಲ್ಲದೆ ಸಾರಿ ಹೋಗುತ್ತಾರೆ. ಇದಕ್ಕೆ "ಸಾರೀಕಿ ಬೇಟೆ" ಎಂದೇ ಹೆಸರು. ಮರದ ಕೊಂಬೆಯ ಮೇಲೋ, ಇಲ್ಲವೆ ಆಯಕಟ್ಟಿನ ಸ್ಥಳದಲ್ಲಿ ಅಡಗಿ ಕೂತುಕೊಂಡು ಬಹಳ ಸಮಯ ಯಾವ ಸದ್ದೂ ಮಾಡದೆ ಕಾಯ್ದು ಕುಳಿತುಕೊಳ್ಳಬೇಕಾಗುತ್ತದೆ. ಮೃಗ ಬರುವ ಸೂಚನೆ, ಸದ್ದುಗಳು ವ್ಯಕ್ತವಾದಾಕ್ಷಣ ತಮ್ಮ ಗುರಿಯನ್ನು ಅತ್ತಕಡೆ ಹರಿಸಿ ಕಾಯುತ್ತಿರುತ್ತಾರೆ. ಪ್ರಾಣಿ ಅವರ ದೃಷ್ಟಿಗೆ ಸರಿಯಾಗಿ ಬಿದ್ದು, ಅದು ಗುಂಡಿನೇಟು ತಗಲುವಷ್ಟು ಹತ್ತಿರದಲ್ಲಿದೆ ಎಂದು ಖಚಿತವಾದ ತಕ್ಷಣ ಆಯಕಟ್ಟಿಗೆ ಗುರಿಯಿಟ್ಟು ಗುಂಡು ಹಾರಿಸಿಬಿಡುತ್ತಾರೆ. ಬಹುಪಾಲು ಪ್ರಾಣಿಗಳು ಅಲ್ಲೇ ನೆಗೆದುಬಿದ್ದು ಪ್ರಾಣ ಬಿಡುತ್ತವೆ. ಸರಿಯಾದ ಜಾಗಕ್ಕೆ ಏಟು ತಗಲದ ಕೆಲವು ಪ್ರಾಣಿಗಳು ಕಾಡಿನೊಳಗೆ ನುಗ್ಗಿ ತಲೆ ಮರೆಸಿಕೊಂಡು ಓಡುತ್ತವೆ. ಆದರೂ ಈಡುಗಾರ ರಕ್ತ ತೊಟ್ಟಿಕ್ಕಿದ ದಾರಿಯ ಜಾಡು ಹಿಡಿದು ಅದನ್ನು ಹಿಂಬಾಲಿಸಿ ಮತ್ತೆ ಗುಂಡುಹಾರಿಸಲು ಪ್ರಯತ್ನಿಸುತ್ತಾನೆ. ಇದೂ ವಿಫಲವಾದರೆ ಮನೆಗೆ ವಾಪಸು ಬಂದು ಇತರ ಕೆಲವರ ಜೊತೆಗೂಡಿ ಸರಿಯಾದ ಶಿಕಾರಿಯನ್ನೇ ಮಾಡಿ ಅದನ್ನು ತಮ್ಮ ವಶಪಡಿಸಿಕೊಳ್ಳುವುದೂ ಉಂಟು.

## ಸಾಮೂಹಿಕ ಬೇಟೆ

ಸುತ್ತಮುತ್ತಲ ಹಳ್ಳಿಯವರು ಒಟ್ಟು ಸೇರಿ ಸಾಮೂಹಿಕವಾಗಿ ಬೇಟೆ ಮಾಡುವುದು ಒಂದು ಜನಪ್ರಿಯ ವಿಧಾನ. ಸಾಮಾನ್ಯವಾಗಿ ಹಬ್ಬಹರಿದಿನಗಳ ಹಿಂದಲ ಒಂದೆರಡು ದಿನ, ಇಲ್ಲವೆ ಅವು ಮುಗಿದ ನಂತರ ಒಂದೆರಡು ದಿನಗಳಲ್ಲಿ ಇಂತಹ ಏರ್ಪಾಡುಗಳಾಗುತ್ತವೆ. ದಸರಾದ ಮಹಾನವಮಿ, ವಿಜಯದಶಮಿ, ಭೂಮಿ ಹುಣ್ಣಿಮೆ, ಗೌರಿಹಬ್ಬ, ದೀಪಾವಳಿ ಹಾಗೂ ಯುಗಾದಿ ಹಬ್ಬಗಳ ಸಂದರ್ಭದಲ್ಲೇ ಹೀಗೆ ಈಡಾಗುರರೆಲ್ಲಾ ಒಟ್ಟಾಗಿ ಶಿಕಾರಿ ಮಾಡಲು ಅನುಕೂಲ ಸಮಯ. ಮೊದಲೇ ಪ್ರಸ್ತಾಪಿಸಿದ ತುಂಡು ಕಾನುಗಳಲ್ಲಿ ಹಲವು ಬಗೆಯ ಜೀವಾದಿಗಳು ವಾಸವಾಗಿದ್ದು ರೈತರು ಪೈರುಗಳಿಗೆ ಆಗಾಗ್ಗೆ ಲಗ್ಗೆ ಹಾಕಿ ನಾಶಪಡಿಸುತ್ತಿರುತ್ತವೆ. ಅಂತಹ ಕಾಡುಗಳಿಂದ ಅವು ಬಹುಪಾಲು ಹೊರಗೆ ಹೋಗಬಹುದಾದ ಜಾಗಗಳನ್ನು ಮೊದಲೇ ಗುರುತಿಸಿರುತ್ತಾರೆ. ಅಂತಹ ಸ್ಥಳಗಳಿಗೆ "ಬಿಲ್ಲು" ಎಂತಲೂ ಹೆಸರು. ಅಲ್ಲಿ ಬಂದೂಕು ಹಿಡಿದು ಕುಳಿತುಕೊಳ್ಳುವವರಿಗೆ "ಬಿಲ್ಲುಗಾರ"ರೆಂತಲೂ ಹೆಸರು. ನಾಲ್ಕಾರು ಜನ ಇಂಥ ಆಯಕಟ್ಟಿನ ಜಾಗಗಳಲ್ಲಿ ಬಂದೂಕು ಹಿಡಿದು ಕುಳಿತುಕೊಂಡ ನಂತರ, ಅದರ ವಿರುದ್ಧ ದಿಕ್ಕಿನಿಂದ 8-10 ಜನ ಸೋಹುಗಾರರು, ಬೇಟೆ ನಾಯಿಗಳೊಡನೆ ಕಾಡನ್ನು ನುಗ್ಗಿ ಗಲಾಟೆ ಎಬ್ಬಿಸುತ್ತಾರೆ. ಕಲ್ಲು ಹೊಡೆದು ಅಡಗಿ ಕುಳಿತ ಪ್ರಾಣಿಗಳು ಎದ್ದು ಓಡುವಂತೆ ಮಾಡುತ್ತಾರೆ. ನಾಯಿಗಳು ಅವುಗಳ ಬೆನ್ನಟ್ಟುತ್ತವೆ. ಅಂತಿಮವಾಗಿ ಅವು ಒಂದಲ್ಲ ಒಂದು ಬಿಲ್ಲು ಇರುವ ಕಡೆ ಓಡುವುದು ಅನಿವಾರ್ಯವಾಗಿ ಬಿಡುತ್ತದೆ. ಅವು ಕಣ್ಣಿಗೆ ಬೀಳುತ್ತಲೆ

ಬಿಲ್ಲುಗಾರರು ಬಂದೂಕಿನಿಂದ ಗುರಿ ಇಟ್ಟು ಹೊಡೆಯುತ್ತಾರೆ. ಬಹುಪಾಲು ಅವರು ಹಂದಿ, ಕುರಿ, ಬರ್ಕಗಳಂತ ಪ್ರಾಣಿಗಳನ್ನು ಹೊಡೆದುರುಳಿಸಬಹುದಾದರೂ ಕೆಲವರಾದರೂ ಗಾಯ ಗೊಂಡು ಇಲ್ಲವೇ ಏಟು ತಗುಲದೆ ತಪ್ಪಿಸಿಕೊಂಡು ಓಡಿಹೋಗುವುದು ಅಪರೂಪವೇನಲ್ಲ. ಹಾಗೆ ಮುಂದಿನ ಕಾಡಿನ ತುಂಡುಗಳಲ್ಲೂ ಇಂತಹ ಕ್ರಮಜರುಗಿಸುತ್ತಾರೆ. ದಿನದಲ್ಲಿ 3-4 ತುಂಡುಗಳಲ್ಲಿ ಈ ರೀತಿ ಶಿಕಾರಿ ಮಾಡುವುದಕ್ಕೆ ಸಾಧ್ಯವಾಗಬಹುದು. ಮನೆ ಹತ್ತಿರದ ಕಾನುಗಳಲ್ಲಿ ಇಂತಹ ಶಿಕಾರಿಗಳು ಜರುಗುತ್ತಿರುವಾಗ ಸೋಹುಗಾರರ ಆರ್ಭಟ, ಕೂಗಾಟ, ನಾಯಿಗಳ ಬೊಬ್ಬೆ, ಆಗಾಗ್ಗೆ ಕೇಳಿಬರುವ ಬಂದೂಕಿನ ಗುಂಡಿನ ಶಬ್ದ, ಒಂದು ರೀತಿ ಯಲ್ಲಿ ಹತ್ತಿರದಲ್ಲೇ ಯುದ್ಧ ನಡೆಯುತ್ತಿದೆಯೋ ಎನಿಸುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಬಿಲ್ಲು ಗಾರನೊಬ್ಬ ಕೆಲ ಸಾರಿ ಹಾರಿಸಿದ ಗುಂಡು ಪಕ್ಕದ ಬಿಲ್ಲಿನಲ್ಲಿ ಕುಳಿತವನಿಗೆ ತಗುಲುವುದೂ ಉಂಟು. ಅಂದಿನ ಬೇಟೆಯಲ್ಲಿ ದೊರಕಿದ ಪ್ರಾಣಿಗಳನ್ನೆಲ್ಲಾ ಸಾಯಂಕಾಲದ ಹೊತ್ತಿಗೆ ತಂದು "ಹಸಿಗೆ" ಮಾಡಿ ಮಾಂಸವನ್ನು ಹಂಚಿಕೊಂಡು ತಮ್ಮ ತಮ್ಮ ಮನೆಗಳಿಗೆ ಹೋಗುತ್ತಾರೆ.

## ಸಿಸ್ತು ಕಟ್ಟುವುದು

ಭತ್ತದ ಗದ್ದೆಗಳಿಗೆ ನುಗ್ಗಿ ಧಾಳಿ ಮಾಡುವ ಹಂದಿಗಳ ಉಪಟಳವನ್ನು ಕಡಿಮೆ ಮಾಡಲು ಇನ್ನೂ ಒಂದು ಬಗೆಯ ಶಿಕಾರಿ ಮಾಡುತ್ತಾರೆ. ಅದಕ್ಕೆ "ಸಿಸ್ತು ಕಟ್ಟುವುದು" ಎನ್ನುತ್ತಾರೆ. ಹೆಚ್ಚುಕಡಿಮೆ ಕಾಡುಕೋಳಿಗಳನ್ನು ಹಿಡಿಯಲು ಬಳಸುವ "ಕಣ್ಣೀ ಒಡ್ಡುವ" ತಂತ್ರವೇ ಇದಕ್ಕೂ ಮೂಲಾಧಾರ. ಹಗ್ಗದ ಉರುಳಿನ ಬದಲು ಬಂದೂಕು ಆ ಕೆಲಸವನ್ನು ಮಾಡುತ್ತಗೆ. ಅದರಂತೆಯೇ ಹಂದಿ ಕೆಲ ದಿನ ಒಂದೇ ಮಾರ್ಗದಲ್ಲಿ ಚಲಿಸುವಂತೆ ಏರ್ಪಾಡು ಮಾಡಲಾಗುತ್ತದೆ. ಹಂದಿ ಹೆಜ್ಜೆಯ ಗುರುತನ್ನ ನೋಡಿ ಅದು ಎಷ್ಟು ಎತ್ತರವಿರಬಹು ದೆಂಬುದನ್ನು ಅಂದಾಜು ಮಾಡುತ್ತಾರೆ! ಅದು ಹಾಯ್ದು ಹೋಗುವ ದಾರಿಗೆ ಸ್ವಲ್ಪ ದೂರ ದಲ್ಲಿ ಒಂದು ಬಂದೂಕನ್ನು ಮರದ ಗೂಟಗಳ ಕವೆಗಳ ಆಧಾರದ ಮೇಲೆ ನೆಲಮಾಡಿ ಭದ್ರ ಪಡಿಸುತ್ತಾರೆ. ಬಂದೂಕಿನ 'ಕುದುರೆ' (Trigger, ಚಾಪು)ಯನ್ನು ಎಳೆದು ಅದರ ಬುಡಕ್ಕೆ ದಾರದ ಹುರಿಯನ್ನು ಕಟ್ಟಿ, ಅದರ ಇನ್ನೊಂದು ತುದಿಯನ್ನು ಹಂದಿ ಸಾಗುವ ದಾರಿಯಲ್ಲಿ ಅದರ ಕಾಲುಗಳಿಗೆ ತಗಲುವಂತೆ ಅಡ್ಡಲಾಗಿ ಒಂದು ಗಿಡಕ್ಕೆ ಬಿಗಿಯಾಗಿ ಕಟ್ಟುತ್ತಾರೆ. ದಾರ ಒಳ್ಳೆಯ ಬಿರುಸಿನಿಂದ ಇರುವುದರಿಂದ ಹಂದಿ ಕಾಲು ತಗುಲಿದಾಕ್ಷಣ ಬಂದೂಕಿನ ಚಾಪು ಬಿರುಸಿನಿಂದ "ಮಸಿ" ತುಂಬಿ ಮುಚ್ಚಿಸಿದ್ದ "ಕೇಪಿ"ನ್ನು (CAP) ಬಲವಾಗಿ ಅಪ್ಪಳಿಸುತ್ತದೆ. ಅದರಿಂದ ಉಂಟಾಗುವ ಉತ್ಕರ್ಷದಿಂದ ಮದ್ದಿಗೆ ಬೆಂಕಿ ಹತ್ತಿ ಬಂದೂಕಿನೊಳಗೆ ಇದ್ದ ಮದ್ದುಗುಂಡುಗಳು ಸಿಡಿದು ಈಡಾಗುತ್ತದೆ. ಬೇಟೆಗಾರ ಹಂದಿಯ ಎತ್ತರವನ್ನು ಸರಿಯಾಗಿ ಅಂದಾಜು ಮಾಡಿ ಬಂದೂಕನ್ನು ಅದಕ್ಕನುಗುಣವಾಗಿ ಇರಿಸಿದ್ದರೆ ಗುಂಡು ಹಂದಿಗೆ ತಗಲುತ್ತದೆ. ಗುಂಡಿನ ಶಬ್ದ ಕೇಳಿದಾಕ್ಷಣ ಹಂದಿಯ ಹೂಂಕಾರದ ಧ್ವನಿಯೂ ಆ ಪ್ರದೇಶ ದಲ್ಲಿ ಅನುರಣಿಸುತ್ತದೆ. ಸಿಸ್ತು ಕಟ್ಟಿದವರು ಮತ್ತು ಅವರ ಆಜುಬಾಜಿನವರೆಲ್ಲ ಬಂದೂಕು

ಗಳನ್ನು ಹಿಡಿದುಕೊಂಡು ಅಲ್ಲಿಗೆ ಧಾವಿಸುತ್ತಾರೆ. ನಡುರಾತ್ರಿಯ ಕತ್ತಲಲ್ಲಿ ಗಾಯಗೊಂಡ ಹಂದಿಯನ್ನು ಅರಸುತ್ತಾ ಕಾಡು ನುಗ್ಗುವುದು ತುಂಬಾ ಅಪಾಯಕರ. ಗಾಯಗೊಂಡ ಹಂದಿಯೇ ಯಾರ ಮೈಮೇಲಾದರೂ ಹರಿಹಾಯಬಹುದು. ಇಲ್ಲವೆ ಅದನ್ನು ಬಂದೂಕಿನಿಂದ ಮತ್ತೆ ಹೊಡೆಯುವಾಗ ಅಪ್ಪಿತಪ್ಪಿ ಜೊತೆಯಲ್ಲಿ ಹೋದವರಿಗೂ ಗುಂಡು ಬಿದ್ದಿರುವ ಪ್ರಸಂಗ ಗಳು ಅಪರೂಪಕ್ಕಾದರೂ ನಡೆದದ್ದುಂಟು. ರಾತ್ರಿಹೊತ್ತು ಹೀಗೆ ಕಾಡಿಗೆ ಹೋದವರ ಕೂಗಾಟ, ಬಂದೂಕಿನ ಶಬ್ದಗಳೆಲ್ಲ ಮನೆಗೂ ಕೇಳಿಸುತ್ತಿದ್ದು, ಹೆಂಗಸರು ಮಕ್ಕಳೆಲ್ಲ ಆತಂಕ ಗೊಳ್ಳುವಂತಾಗುತ್ತದೆ. ಕ್ರಿಸ್‌ಮಸ್ ರಜೆಯಲ್ಲಿ ಇಂತಹ ಬೇಟೆಗಳು ಹೆಚ್ಚಾಗಿ ಜರುಗುವುದು. ಈ ತರಹದ ಗಲಾಟೆಗಳನ್ನು ಕೇಳಿಸಿಕೊಂಡು ನಾನೇ ಬಹಳಷ್ಟು ಗಾಬರಿಪಡುತ್ತಿದ್ದೆ. ಆದರೆ ಮತ್ತೆ ಕೆಲವೇ ಘಳಿಗೆಗಳಲ್ಲಿ ಹಂದಿಯನ್ನು ನಾಲ್ಕಾರು ಜನ ಅಡ್ಡಲಾಗಿ ಹೊತ್ತುಕೊಂಡು ಬರುತ್ತಿರುವುದನ್ನು ನೋಡಿದಾಕ್ಷಣ ವಾತಾವರಣವೇ ಬದಲಾಯಿಸಿಬಿಡುತ್ತದೆ. ಎಲ್ಲರ ಮುಖದಲ್ಲೂ ಆನಂದ, ಹರ್ಷ ಉಕ್ಕಿಬರು ತ್ತದೆ. ಹಂದಿಯ ಹತ್ತಿರ ಹೋಗಿ ಅದರ ಭೈರಿಗೆ ಕೂದಲುಗಳನ್ನು ಕಿತ್ತುಕೊಳ್ಳಲು ನಾಮುಂದು ತಾಮುಂದು ಎಂದು ಹೆಂಗಸರು ಮಕ್ಕಳೆಲ್ಲಾ ಧಾವಿಸುತ್ತಾರೆ. ಈ ಭೈರಿಗೆಗಳಿಂದ ತಯಾರಿಸಿದ ಬ್ರಷ್, ಚಿನ್ನ, ಬೆಳ್ಳಿಯ ಆಭರಣಗಳನ್ನು ಶುಚಿಗೊಳಿಸಲು ಆ ಕಾಲದಲ್ಲಿ ಹೆಚ್ಚಿನ ಬೇಡಿಕೆ ಇದ್ದಿತು.

## ಬೇಟೆ ದೇವರು !

ಹೀಗೆ ಬೇಟೆಯಾಡಿದ ಪ್ರಾಣಿಗಳ ಹೊರಮೈಯನ್ನು ಸುಟ್ಟು ಇಲ್ಲವೆ ಚರ್ಮ ಸುಲಿದು ಅವುಗಳ ಶರೀರದ ವಿವಿಧ ಭಾಗಗಳನ್ನು ಕತ್ತರಿಸಿ ತುಂಡು ತುಂಡುಗಳಾಗಿ ರಾಶಿ ಹಾಕುತ್ತಾರೆ. ಈ ಕ್ರಮಕ್ಕೆ 'ಹಸಿಗೆ' ಎನ್ನುತ್ತಾರೆ. ನಮ್ಮ ಮನೆ ಎದಿರಿನ ತೋಟದ ಆಚೆ ಕಡೆ ಯಲ್ಲೇ ನಮ್ಮ ಆಸುಪಾಸಿನಲ್ಲಿ ನಡೆದ ಬೇಟೆಯ ಪ್ರಾಣಿಗಳ ಹಸಿಗೆ ಆಗುತ್ತಿದ್ದು, ಅಲ್ಲಿ ಬೇಟೆ ದೇವರ ಬನ ಎಂಬ ಸ್ವಲ್ಪ ಬಯಲಾದ ಸ್ಥಳವಿತ್ತು. ಪ್ರತಿವರ್ಷ ಒಳ್ಳೆಯ ಬೇಟೆಯಾಗು ವಂತೆ ಅನುಗ್ರಹ ಮಾಡಲು ನಮಗೊಂದು "ಬೇಟೆ ದೇವರು" ಇದೆ! ಮರವೊಂದರ ಬುಡ ದಲ್ಲಿ ತ್ರಿಕೋಣಾಕಾರದ ಕಲ್ಲು ನಿಲ್ಲಿಸಿರುತ್ತಿದ್ದರು. ಪಾಚಿ ಬೆಳೆದುಕೊಂಡ ಕಾಡುಕಲ್ಲು. ಪ್ರತಿ ವರ್ಷವೂ ಅದಕ್ಕೆ ಸರಿಯಾದ ಪೂಜೆ ಪುನಸ್ಕಾರಗಳು ಆಗದಿದ್ದರೆ ಆ ವರ್ಷ ಸರಿಯಾಗಿ ಶಿಕಾರಿಗಳೇ ಆಗುವುದಿಲ್ಲವಂತೆ ! ಹೀಗೆ ಅಲ್ಲಿ ಹಸಿಗೆ ಮಾಡುವ ಸಂದರ್ಭಗಳಲ್ಲಿ ಅದಕ್ಕೆ ವಿಶೇಷ ಪೂಜೆ ನಡೆಯುತ್ತದೆ. ಕಲ್ಲನ್ನು ತೊಳೆದು, ಸುತ್ತಲ ಗಿಡಗೆಂಟೆಗಳನ್ನೆಲ್ಲಾ ತೆಗೆದು ಹಾಕಿ, ಸೆಗಣಿ ನೀರು ಚುಮುಕಿಸಿ ಶುದ್ಧಿ ಮಾಡಲಾಗುತ್ತದೆ. ನಂತರ ಹೂವು ಮುಡಿಸಿ, ಧೂಪ ಹಾಕಿ, ತಯಾರಾದ ಮಾಂಸದ ಹುರಿ ತುಂಡಿನ ನೈವೇದ್ಯವನ್ನು ಅರ್ಪಿಸಲಾಗುತ್ತದೆ. ಮತ್ತಷ್ಟು ಒಳ್ಳೆಯ ಶಿಕಾರಿಗಳಾಗಲೆಂದು ಎಲ್ಲರೂ ಕೈಮುಗಿದು ಅಡ್ಡಬೀಳುತ್ತಾರೆ. ಹಸಿಗೆಯ ಮತ್ತಿತರ ಇತರ ಕಾರ್ಯಗಳಲ್ಲಿ ನನಗೆ ಭಾಗವಹಿಸಲಾಗದಿದ್ದರೂ ಬೇಟೆ ದೇವರ ಪೂಜೆ ಮತ್ತು ನೈವೇದ್ಯ ಹಂಚುವುದರಲ್ಲೆಲ್ಲಾ ನನ್ನದೇ ಪ್ರಮುಖ ಪಾತ್ರವೆಂದು ಬೇರೆ ಹೇಳಬೇಕಾಗಿಲ್ಲ.

# ಹಬ್ಬ ಹರಿದಿನಗಳು

ನಮ್ಮ ಮನೆಯಲ್ಲಿ ಹಿಂದೂಗಳ ಎಲ್ಲಾ ಹಬ್ಬಗಳನ್ನು ಆಚರಿಸುವರಾದರೂ ಪೇಟೆ ಪಟ್ಟಣಗಳಂತೆ ಅದ್ಧೂರಿಯಿಂದ ನಡೆಸುವುದಿಲ್ಲವೆನ್ನಬಹುದು. ಅವುಗಳಲ್ಲಿ ರೈತಾಪಿ ಜನರ ಕಸುಬು ಮತ್ತು ಜೀವನ ಕ್ರಮಗಳಿಗೆ ಸಂಬಂಧಿಸಿದ ಹಬ್ಬಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿರುವುದು ಸ್ವಾಭಾವಿಕ. ನಾನು ಶಾಲಾಕಾಲೇಜುಗಳಿಗೆ ಸೇರುವುದಕ್ಕೆ ಮೊದಲ ವರ್ಷಗಳಲ್ಲಿ ಈ ಹಬ್ಬಗಳ ಆಚರಣೆಯಲ್ಲಿ ಭಾಗವಹಿಸಿ ನಕ್ಕು ನಲಿಯುತ್ತಿದ್ದುದು ನೆನಪಿದೆ. ನಂತರದ ವರ್ಷಗಳಲ್ಲಿ ಅದರಲ್ಲೂ ಮೆಡಿಕಲ್ ಕಾಲೇಜು ಸೇರಿದ ಮೇಲೆ ನನ್ನ ಪಾಲಿಗೆ ಮನೆಯ ಹಬ್ಬಗಳು ಇಲ್ಲವಾದವೆಂದೇ ಹೇಳಬಹುದು.

## ಭೂಮಿ ಹುಣ್ಣಿಮೆ ಹಬ್ಬ

ಮುಖ್ಯವಾಗಿ ರೈತಾಪಿ ಜನರ ಕಸುಬು ಮತ್ತು ಜೀವನಕ್ಕೆ ಪ್ರಸ್ತುತವಾದ ಹಬ್ಬವೆಂದರೆ ಭೂಮಿ ಹುಣ್ಣಿಮೆ ಹಬ್ಬ. ಈ ಹಬ್ಬ ಸಾಮಾನ್ಯವಾಗಿ ಅಕ್ಟೋಬರ್ ತಿಂಗಳಲ್ಲಿ (ಆಶ್ವೀಜ ಶುದ್ಧ ಪೂರ್ಣಮಿ) ದಿನ ಬರುತ್ತದೆ. ಮಳೆಗಾಲದಲ್ಲಿ ನಾಟಿ ಹಾಕಿದ ಭತ್ತದ ಸಸಿಗಳಲ್ಲಿ ತೆನೆ ಮೂಡುವ ಕಾಲ ಅದಾಗಿರುತ್ತದೆ. ರೈತರ ಪರಿಭಾಷೆಯಲ್ಲಿ ಭೂಮಿತಾಯಿ ಗರ್ಭಿಣಿಯಾಗಿದ್ದಾಳೆಂಬ ಭಾವನೆಯುಂಟಾಗಿರುತ್ತದೆ. ಅದರಿಂದ ಮಾನವ ಗರ್ಭಿಣಿಯರಿಗೆ ಉಂಟಾಗುವ ಬಯಕೆ ಅಂತೆಯೇ ಭೂಮಿ ತಾಯಿಗೂ ಬಯಕೆ ಆಗಿರುತ್ತದೆಂಬುದು ಅವರ ಅನಿಸಿಕೆ. ಆ ಸಲುವಾಗಿ ವಿವಿಧ ಭಕ್ಷ್ಯಭೋಜ್ಯಗಳನ್ನು ತಯಾರಿಸಿ ಆ ದಿನ ಬೆಳಗಿನ ಜಾವ ಬೆಳೆ ಇರುವ ಗದ್ದೆಯೊಂದರಲ್ಲಿ ಎಡೆ ಇಟ್ಟು ಭೂಮಿ ಪೂಜೆ ಮಾಡುತ್ತಾರೆ. ಹಲವು ಬಗೆಯ ಅಂಬಲಿ ಹಾಗೂ ಮತ್ತಿತರ ಪದಾರ್ಥಗಳನ್ನು ಮಾಡಿ ಬಡಿಸುತ್ತಾರೆ. ಇವ್ಯಾವಕ್ಕೂ ಉಪ್ಪು ಹಾಕದೆ ತಯಾರು ಮಾಡಿರುವುದು ವೈಶಿಷ್ಟ್ಯ. ಬಡಿಸುವ ನಾನಾ ತರಹೆಯ ಭಕ್ಷ್ಯಗಳಲ್ಲಿ ಭೂಮಿ ಮೇಲೆ ಬೆಳೆದಿರುವ ನೂರಾಒಂದು ಜಾತಿಯ ಗಿಡಮರಗಳ ಎಲೆಗಳನ್ನ ಸೇರಿಸಿ - 'ಬೆರಕೆ ಸೊಪ್ಪಿನ ಪಲ್ಯ'ವನ್ನು ತಯಾರು ಮಾಡಿ ಬಡಿಸುವುದೂ ಒಂದು ವಿಶೇಷವೆ. ಭೂಮಿ ಪೂಜೆ ಸಾಮಾನ್ಯವಾಗಿ ಬೆಳಗಿನ ಜಾವದಲ್ಲೇ ನಡೆಯುತ್ತದೆ. ಅದರ ಸಲುವಾಗಿ ಮನೆಯಲ್ಲಿ ಹೆಂಗಸರು ಹಿಂದಿನ ರಾತ್ರಿಯೆಲ್ಲಾ ಎಚ್ಚರವಿದ್ದು, ಮಡಿಯಿಂದ ಅಡುಗೆ ಮಾಡಬೇಕಾಗುತ್ತದೆ. ಹಿಂದಿನ ದಿನವೇ ಮನೆ ಹತ್ತಿರದ ಭತ್ತ

ಬೆಳೆದ ಗದ್ದೆಯ ಅಂಚಿನಲ್ಲಿರುವ ಹುಲ್ಲು ಕಸಕಡ್ಡಿಗಳನ್ನು ತೆರಪು ಮಾಡಲಾಗುತ್ತದೆ. ಎರಡು ಬಾಳೆ ಸಸಿಗಳನ್ನು ನೆಟ್ಟು ಸಣ್ಣದೊಂದು ಮಂಟಪವನ್ನು ನಿರ್ಮಾಣ ಮಾಡುತ್ತಾರೆ. ಅಂದಿನ ಬೆಳಗಿನ ಜಾವ, ತಯಾರಿಸಿದ ಆಹಾರ ಪದಾರ್ಥಗಳು, ಪೂಜಾ ಸಾಮಗ್ರಿಗಳನ್ನು ಒಟ್ಟುಗೂಡಿಸಿಕೊಂಡು, ಮೊದಲೇ ತಯಾರಿಸಿದ ಜಾಗಕ್ಕೆ ಜಾಗಟೆ ಭಾರಿಸುತ್ತಾ ನಾಲ್ಕಾರು ಜನ ಹೋಗುತ್ತಾರೆ. ಪೂಜೆ ಮಾಡುವವರೊಬ್ಬರು ಸ್ನಾನ ಮಾಡಿ ಮಡಿಯುಟ್ಟು ಹಿಂಬಾಲಿಸುತ್ತಾರೆ. ಗದ್ದೆಯಲ್ಲಿ ದೀಪ ಹಚ್ಚಿ, ಧೂಪ ಹಾಕುತ್ತಾರೆ, ಪೂಜೆ ನಡೆಯುತ್ತದೆ. ಆಹಾರ ವಸ್ತುಗಳನ್ನು ಮೊರ ಒಂದರಲ್ಲಿರಿಸಿ ಎಡೆ ಹಾಕುತ್ತಾರೆ. ಇವಲ್ಲದೆ ಮಲೆನಾಡಿಗೆ ವಿಶಿಷ್ಟವಾದ 'ಕೊಟ್ಟೆ ಕಡುಬ'ನ್ನು ಗದ್ದೆಯ ನಡುವೆ ಹೂಳಿಡುತ್ತಾರೆ. ಪೂಜೆ ಮುಗಿಯುವ ಹೊತ್ತಿಗೆ ಬಂದೂಕಿನಿಂದ ಗುಂಡು ಹಾರಿಸಿ ಭೂತಾಯಿಗೆ ಗೌರವ ತೋರಿಸುತ್ತಾರೆ. ಆಜುಬಾಜಿನ ಹಳ್ಳಿಗಳ ಬೇರೆ ಬೇರೆ ಕುಟುಂಬದವರು ಅದೇ ಸಮಯಕ್ಕೆ ಶಂಖ ಜಾಗಟೆ ಬಾರಿಸಿ ಗುಂಡು ಹಾರಿಸುವ ಶಬ್ದ ಎಲ್ಲ ಕಡೆ ಅನುರಣಿಸುತ್ತಿರುವುದು ಒಂದು ಬಗೆಯ ರೋಮಾಂಚನ ಉಂಟುಮಾಡುತ್ತದೆ. ನಂತರ ತಯಾರಿಸಿದ ಆಹಾರ ಪದಾರ್ಥಗಳನ್ನು ತಮ್ಮ ಎಲ್ಲಾ ಗದ್ದೆ-ತೋಟಗಳಿಗೆ ಚಮುಕಿಸುತ್ತಾರೆ.

ಭೂಮಿ ಹುಣ್ಣಿಮೆ ಹಬ್ಬ ಹಲವು ಕಾರಣಗಳಿಂದ ನನಗೆ ಪ್ರಿಯವಾಗಿತ್ತು. ನಾನು ಊರಲ್ಲಿದ್ದಾಗಲೆಲ್ಲಾ ಆ ಪೂಜೆಯ ನಡೆಸುವ ಪೂಜಾರಿ ಪಟ್ಟ ನನಗೇ ದೊರೆಯುತ್ತಿತ್ತು. ಶಾಲೆಗಳಿಗೆ ಸೇರಿದ ನಂತರವೂ ದಸರಾ ರಜೆಯ ಆಜುಬಾಜಿನಲ್ಲಿ ಬರುತ್ತಿದ್ದ ಈ ಹಬ್ಬದವರೆಗೂ ನಾನು ಊರಲ್ಲೇ ಇದ್ದು, ಪೂಜೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದೆ. ನಮ್ಮಲ್ಲಿ ಜರುಗುತ್ತಿದ್ದ ಹಬ್ಬಗಳಲ್ಲೆಲ್ಲಾ ಭೂಮಿ ಹುಣ್ಣಿಮೆಯೊಂದರಲ್ಲಿ ಮಾತ್ರ ಬೆಳಗಿನ ಹೊತ್ತು ಊಟ ಮಾಡುವ ಸಾಧ್ಯತೆ ಇರುತ್ತಿದ್ದುದು, ಅದು ಪ್ರಿಯವಾಗಲು ಇನ್ನೊಂದು ಕಾರಣ. ಇತರ ಹಬ್ಬಗಳಲ್ಲಿ ಬೆಳಗಿನಿಂದ ಹೆಚ್ಚು ಕಡಿಮೆ ಸಾಯಂಕಾಲದವರೆಗೂ ಉಪವಾಸವಿದ್ದು, ದೇವರ ಪೂಜೆ ಮುಗಿದು ಊಟ ಬಡಿಸುವುದು ಸಾಯಂಕಾಲ ಅಥವಾ ರಾತ್ರಿ. ಈ ಹಬ್ಬಕ್ಕೂ ನನಗೂ ಒಂದು ರೀತಿಯ ನಂಟು ಬೆಳೆದು ಬಂದಿತ್ತೆಂದೇ ಹೇಳಬಹುದು. ಮುಂದೆ ನಾನು ಓದಿದ ನಂತರವೂ ರೈತಾಪಿ ಕೆಲಸ ಮುಂದುವರಿಸಲಿ ಎಂಬ ಆಸೆಯಿಂದ ನನ್ನವ್ವ ಭೂಮಿ ಪೂಜೆಯ ಪೂಜಾರಿ ನಾನೇ ಆಗಿರಬೇಕೆಂದು ಪುಸಲಾಯಿಸುತ್ತಿದ್ದಳು. ಕಾಕತಾಳಿಯವೋ ಎಂಬಂತೆ ನಮ್ಮವರು ಸದಾ ಭೂಮಿ ಪೂಜೆ ಮಾಡುತ್ತಿದ್ದ ಚುಂಗೋಳಿ ಮರನ ಗದ್ದೆ, ಮುಂದೆ ಆಸ್ತಿ ಹಿಸ್ಸೆಯಾದಾಗ ನನ್ನ ಪಾಲಿಗೆ ಬಂದಿತ್ತು ! ಅವ್ವನಿಗೆ ಅದರಿಂದ ಸಂತೋಷವಾಗಿತ್ತೆಂದು ಬಲ್ಲೆ ; ಆದರೆ ಮುಂದೆ ಅವರ ಆಸೆಯನ್ನು ನೆರವೇರಿಸದಿದ್ದುದಕ್ಕೆ ಕೆಲಸಾರಿ ವಿಷಾದವಾಗುತ್ತದೆ.

## ಹೊಸ್ತಿನ ಮನೆ

ಭೂಮಿ ಹುಣ್ಣಿಮೆ ಹಬ್ಬ ಮುಗಿದ ಸುಮಾರು ಒಂದು ತಿಂಗಳ ನಂತರ ಕಾರ್ತೀಕ

ಮಾಸದಲ್ಲಿ ಮಲೆನಾಡಿನ ರೈತರು ಆಚರಿಸುತ್ತಿದ್ದ ಇನ್ನೊಂದು ವಿಶಿಷ್ಟ ರೀತಿಯ ಹಬ್ಬವೆಂದರೆ "ಹೊಸ್ತಿನ ಮನೆ" ಮತ್ತು ಹೊಸ ಅಕ್ಕಿ ಹಬ್ಬ. ಗದ್ದೆಯಲ್ಲಿ ಪಸಲು ಬಲಿತ ಮೇಲೆ ಅದರಲ್ಲಿ ಸ್ವಲ್ಪ ಭಾಗವನ್ನು ಶಾಸ್ತ್ರೋಕ್ತವಾಗಿ ಪೂಜೆ ಮಾಡಿ ಮನೆಗೆ ತರುತ್ತಾರೆ. ಸಾಮಾನ್ಯವಾಗಿ ಅದೊಂದು ಶನಿವಾರ ಜರುಗುವ ಪೂಜೆ. ತೆನೆಗಳನ್ನು ತುಳಸಿ ಮೇಲೆ ಹಾಗೂ ಒಳಗಡೆ ದೇವರ ಹಲಗೆಯ ಮೇಲೂ ಇಟ್ಟು ಪೂಜೆಗೆ ಅಣಿ ಮಾಡುತ್ತಾರೆ. ಅದೊಂದು ವಿಶೇಷ ವಾಗಿ ತುಳಸಿ ಪೂಜೆ. ಕೆಲವು ಕಡೆ ಬೆಳಗಿನ ಹೊತ್ತೇ ಆ ಪೂಜೆ ನಡೆಸುವವರಾದರೂ ಬಹು ಪಾಲು ಜನರು ರಾತ್ರಿ ಹೊತ್ತೇ ನಡೆಸುವುದು ವಾಡಿಕೆ.

ತುಳಸಿಯ ಸುತ್ತ ದೀಪ ಉರಿಸಲು ಏರ್ಪಾಡಾಗುತ್ತದೆ. ನಾಲ್ಕು ಕಡೆ ಬಾಳೆ ಕಂಬಗಳನ್ನು ನೆಟ್ಟು ಅಲಂಕರಿಸುತ್ತಾರೆ. ರಾತ್ರಿಯ ಪೂಜೆಯ ಸಮಯದಲ್ಲಿ ಹಲವು ದೇವರುಗಳಿಗೆ "ಕಾಣಿಕೆ ಕಟ್ಟುವುದು" ಎಂಬ ಸಂಪ್ರದಾಯ ಮಲೆನಾಡಿನ ರೈತರೆಲ್ಲರ ಮನೆಗಳಲ್ಲೂ ಹಿಂದಿನಿಂದ ನಡೆದುಬಂದಿದೆ. ಘಟ್ಟದ ಮೇಲಿನ ತಿರುಪತಿ ತಿಮ್ಮಪ್ಪನಿಂದ ಹಿಡಿದು, ಘಟ್ಟದ ಕೆಳಗಿನ ಧರ್ಮಸ್ಥಳ, ಪೆರಡೂರು, ಕಮಲ ಶಿಲೆ ಮುಂತಾಗಿ 20-30 ದೇವರುಗಳಿಗೆ ಕಾಣಿಕೆಯನ್ನು ತೆಗೆದು ಇಡುತ್ತಾರೆ ಈ ಸಂದರ್ಭದಲ್ಲಿ. ಪ್ರತಿಯೊಂದು ದೇವರಿಗೂ ಒಂದೊಂದು ಕುಡಿಕೆ ಅಥವಾ ಬಿದಿರು ಬೊಂಬುಗಳಲ್ಲಿ ನಾಣ್ಯಗಳನ್ನು ತುಂಬಿ ಟ್ಟಿರುತ್ತಾರೆ. ಪ್ರತಿ ವರ್ಷ ನಾಲ್ಕಾಣೆ, ಎಂಟಾಣೆ ಹೆಚ್ಚೆಂದರೆ ಒಂದು ರೂಪಾಯಿಗಳವರೆಗೂ ವರ್ಷದ ಮನೆಯ ಕಾಣಿಕೆಯಾಗಿ ಹಾಕಲಾಗುತ್ತದೆ. ಮತ್ತೆ ಕೆಲವರು ತಮ್ಮ ತಮ್ಮ ಮಕ್ಕಳಿಗೆ ಒಳ್ಳೆಯದಾಗಲೆಂದು ವಿಶೇಷವಾಗಿ ದುಡ್ಡನ್ನು ಹಾಕಿಸುತ್ತಾರೆ. ಅಂತಹ ಮಡಿಕೆಗಳಲ್ಲಿ ಅನಾದಿಯಿಂದಲೂ ದುಡ್ಡು ಶೇಖರವಾಗಿ ನೂರಾರು ವರ್ಷಗಳ ನಾಣ್ಯವನ್ನು ಅವುಗಳಲ್ಲಿ ನೋಡಬಹುದಾಗಿತ್ತು. ಮುಂದೆ ಯಾವಾಗಲಾದರೂ ಆ ದೇವಾಲಯಗಳಿಗೆ ತೀರ್ಥಯಾತ್ರೆ ಹೋಗುವಾಗ ಸಂಬಂಧಿಸಿದ ದೇವರ ಕಾಣಿಕೆಯನ್ನು ತೆಗೆದುಕೊಂಡು ಹೋಗಿ ಒಪ್ಪಿಸುತ್ತಾರೆ. ಕಾಣಿಕೆ ಶೇಖರಿಸುವ ಎಲ್ಲಾ ಕುಡಿಕೆ, ಅಂಡೆಗಳನ್ನೆಲ್ಲಾ ಸೇರಿಸಿ ಭದ್ರವಾದ ಬೆತ್ತದ ಪೆಟ್ಟಿಗೆಯಲ್ಲಿಟ್ಟು, ಎತ್ತರದ ನಾಗಂದಿಗೆಯಲ್ಲಿ ಇರಿಸುತ್ತಾರೆ. ಅದನ್ನು ಇನ್ನು ಮುಂದಿನ ವರ್ಷವೇ ಹೊರತೆಗೆಯುವುದು.

ತುಳಸಿ ಪೂಜೆಯ ವಿಧಿ ವಿಧಾನಗಳೆಲ್ಲಾ ಮುಗಿದ ಮೇಲೆ ಪಿತೃಗಳಿಗೆ ಎಡೆಯಿಟ್ಟು ಪೂಜಿಸುತ್ತಾರೆ. ಆ ದಿನ ಎಲ್ಲಾ "ಜೈನ ಎಡೆ" (ಸಸ್ಯಾಹಾರ) ಮಾತ್ರ !

ಇದಲ್ಲದೆ "ಹೊಸ ಅಕ್ಕಿ ಅನ್ನ" ಎಂಬ ಹಬ್ಬದ ಆಚರಣೆಯೂ ಪ್ರಚಲಿತವಿದೆ. ಕೆಲವರು ಹೊಸ್ತಿನ ಮನೆಯ ಮರುದಿನ ಭಾನುವಾರವೇ ಅದನ್ನು ಆಚರಿಸಿದರೆ ಮತ್ತೆ ಕೆಲವರು ಫಸಲನ್ನು ಕಣಕ್ಕೆ ತಂದನಂತರ (ಒಂದೆರಡು ತಿಂಗಳು ಬಿಟ್ಟು) ಆಚರಿಸುತ್ತಾರೆ. ಹೊಸದಾಗಿ ಬಂದ ಭತ್ತವನ್ನು ಆ ದಿನದ ಅಡಿಗೆಗಳಿಗೆ ಮೊಟ್ಟ ಮೊದಲು ಬಳಸುವುದಕ್ಕಾಗಿ ಈ ಹಬ್ಬ. ಬೆಳಿಗ್ಗೆ ಕಣದಲ್ಲಿ ರಾಶಿ ಹಾಕಿದ್ದ ಭತ್ತದ ರಾಶಿಗೆ ಪೂಜೆ ನಡೆಯುತ್ತದೆ.

ಅದರಲ್ಲಿ ಸ್ವಲ್ಪ ಭತ್ತವನ್ನು ಕುಟ್ಟಿ ಅಕ್ಕಿ ತಯಾರು ಮಾಡುತ್ತಾರೆ. ಆ ದಿನದ ಅಡಿಗೆಗೆ ಪೂರ್ಣಾ ಹೊಸ ಅಕ್ಕಿಯನ್ನೇ ಬಳಸಲಾಗದಿದ್ದರೂ ಹಳೆಯ ಅಕ್ಕಿಯಿಂದ ತಯಾರಿಸುವ ಪದಾರ್ಥಗಳಲ್ಲೆಲ್ಲಾ ಅದು ಸೇರುವಂತೆ ಮಾಡುತ್ತಾರೆ. ಅಂದಿನ ಸಾಯಂಕಾಲ ಪಿತೃಗಳಿಗೆ ಎಡೆಯಿಟ್ಟು ಪೂಜೆ ಮಾಡುತ್ತಾರೆ. ಆದರೆ ಈ ಸಾರಿ ಮಾತ್ರ ಮಾಂಸದ ಭಕ್ಷ್ಯಗಳಿಗೆ ಪ್ರಾಧಾನ್ಯವಿರುತ್ತದೆ. ಅಲ್ಲದೆ ನೆಂಟರಿಷ್ಟರನ್ನು ಆಹ್ವಾನಿಸಿ ಸಂತೋಷ ಸಡಗರಗಳಿಂದ ಈ ಹಬ್ಬ ಜರುಗಿಸುತ್ತಾರೆ.

## ದೀಪಾವಳಿ

ಮಲೆನಾಡಿನ ರೈತಾಪಿ ಜನರು ಆಚರಿಸುವ ಹಬ್ಬಗಳ ಪೈಕಿ ದೀಪಾವಳಿ ತುಂಬಾ ಸಂತೋಷ ಸಡಗರಗಳಿಂದ ಜರುಗುತ್ತದೆ. ಮೂರು-ನಾಲ್ಕು ದಿನಗಳಲ್ಲಿ ಈ ಹಬ್ಬದ ವಿವಿಧ ಆಚರಣೆಗಳು ನಡೆಯುತ್ತವೆ. ಶ್ರೀ ಕೃಷ್ಣ ಪರಮಾತ್ಮನು ನರಕಾಸುರನನ್ನು ಸಂಹರಿಸಿದ ಕುರುಹವಾಗಿ ನರಕ ಚತುರ್ದಶಿಯ ದಿನ ಕೆಲವು ಪೂಜೆಗಳಾದರೆ, ತ್ರಿವಿಕ್ರಮನಿಂದ ಪಾತಾಳ ಲೋಕಕ್ಕೆ ತಳ್ಳಲ್ಪಟ್ಟ ಬಲಿಚಕ್ರವರ್ತಿ ತನ್ನ ಪ್ರಜೆಗಳನ್ನು ನೋಡಿ ಹೋಗಲು ಬರುತ್ತಾನೆಂಬ ಸಂಭ್ರಮ ಜನಗಳಲ್ಲಿರುತ್ತದೆ. ಚತುರ್ದಶಿಯ ದಿನ ಬೆಳಗಿನ ಮುಂಚೆಯೇ ಅಭ್ಯಂಜನ (ಎಣ್ಣೆಸ್ನಾನ) ಮಾಡಬೇಕಾದ ಪರಿಸ್ಥಿತಿ ತೀರಾ ಎಳೆಯರಾಗಿದ್ದ ನಮಗೆ ಪೇಚಿನ ಸಂಗತಿಯಾಗುತ್ತಿತ್ತು. ಅದೊಂದು ಬಲವಂತ ಮಾಘ ಸ್ನಾನವೇ ಸರಿ. ಮುಂದೆ ದೊಡ್ಡವರಾದ ಮೇಲೆ ಓರಗೆಯ ಹುಡುಗರೆಲ್ಲಾ ಎಣ್ಣೆ ಸವರಿಕೊಂಡು ಒಬ್ಬರನ್ನೊಬ್ಬರು ಗೇಲಿ ಮಾಡುವುದು ಖುಷಿ ಎನಿಸುತ್ತಿತ್ತು. ಮರುದಿನ ಅಮವಾಸ್ಯ ದಿನ ಮನೆಯ ಜಾನುವಾರುಗಳಿಗೆಲ್ಲಾ ಮೈ ತೊಳೆಯುವ ಕೆಲಸ. ನಮಗಂತೂ ಹೊಳೆ ಹತ್ತಿರವೇ ಇದ್ದು ಎಳೆಯರಾದ ನಾವು ಹಸುಗಳಿಗ ಸ್ನಾನ ಮಾಡಿಸುವಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಲು ಆಗದಿದ್ದರೂ, ಆ ಅವಕಾಶವನ್ನು ಹೊಳೆಯಲ್ಲಿ ಹಾರಿ ಡುಮ್ಮಿ ಡುಮ್ಮಿ ಮಾಡಿ ಈಜಾಡುವುದರಲ್ಲಿ ಸಂತಸಪಡುತ್ತಿದ್ದೆವು. ಅದರ ಮುಂದಿನ ದಿನ ನಮ್ಮ ಕಡೆ ಪೂರ್ಣ ಪ್ರಮಾಣದ ದೀಪಾವಳಿ ; ಬೆಳಿಗ್ಗೆ ಗೋ ಪೂಜೆಯ ಸಂಭ್ರಮ. ಸ್ವಲ್ಪ ಸಮಯದಲ್ಲೇ "ಮೇಳಿ ದೇವರ ಪೂಜೆ". ದಸರೆಯ ನವಮಿಯಲ್ಲಿ ಪಟ್ಟಣದ ಜನ ಆಯುಧ ಪೂಜೆ ಮಾಡುವ ರೀತಿಯಲ್ಲಿ ನಮ್ಮವರು ಬೇಸಾಯಕ್ಕೆ ಬಳಸುವ ನೇಗಿಲು, ನೊಗ, ಹಾರೆ, ಗುದ್ದಲಿ, ಪಿಕಾಸಿ ಮುಂತಾದ ಹತ್ತುಹಲವು ಸಾಮಗ್ರಿಗಳ ಪೂಜೆ. ಇನ್ನು ದೇವರ ಪೂಜೆ, ತುಳಸಿ ಪೂಜೆ ಮಧ್ಯಾಹ್ನದಿಂದ ಸಾಯಂಕಾಲ ಕೆಲಸಾರಿ ರಾತ್ರಿಗೂ ಮುಂದುವರಿಯುವುದುಂಟು. ಬೆಳಿಗ್ಗೆ ಉಪಹಾರವೆಂದು ಭುಂಜಿಸಿದ್ದೆಲ್ಲಾ ಅರಗಿ ಹಸಿವಿನಿಂದ ಹಪಹಪಿಸುವಂತಾಗಿರುತ್ತದೆ ನಮ್ಮ ಪರಿಸ್ಥಿತಿ. ಪೇಟೆ ಪಟ್ಟಣಗಳಾಗಿದ್ದರೆ ಹೋಟೆಲುಗಳಲ್ಲಾದರೂ ತಿಂಡಿ ತೀರ್ಥಗಳಾಗುತ್ತಿದ್ದವು. ಒಳಗಡೆ ಪಿತೃಗಳಿಗೆ ಎಡೆಯಿಡಲು ತಯಾರಿ ನಡೆಯುತ್ತಿದ್ದರೆ ಹೊರಗಡೆ ಪುರುಷರು ರಾತ್ರಿಯಾದ ಕೂಡಲೇ ಗದ್ದೆ-ತೋಟಗಳಲ್ಲಿ ದೀಪ ಹಚ್ಚಲು ದೀಪದ ಕೋಲು

ಗಳ ತಯಾರಿಯಲ್ಲಿರುತ್ತಾರೆ. ಅಂತೂ ಇಂತೂ ಇವೆಲ್ಲಾ ಮುಗಿಯುವ ಸಮಯಕ್ಕೆ ಕತ್ತಲೇ ಆಗಿರುತ್ತದೆ. ಮೊದಲು ತುಳಸಿ ಪೂಜೆ, ಸಾಮಾನ್ಯವಾಗಿ ಮನೆಯ ಯಜಮಾನರಿಂದ ನಡೆಯುತ್ತದೆ. ನಂತರ ಮೇಳಿ ದೇವರ ಪೂಜೆ ಇನ್ನಾರಿಂದಲೋ ಜರುಗುತ್ತದೆ. ಅದೇ ಸಮಯದಲ್ಲಿ ಪಿತೃಗಳಿಗೆ ಎಡೆ ಇಡುವ ಕಾರ್ಯವೂ ಸಾಗುತ್ತಿರುತ್ತದೆ. ಅಲ್ಲಿಗೆ ನಾವೆಲ್ಲಾ ಹೋಗಿ ಧೂಪ ಹಾಕಿಕೊಂಡು "ಅಡ್ಡಬಿದ್ದು" ಬರುವ ಶಾಸ್ತ್ರವಾಗುತ್ತದೆ. ಅಷ್ಟರಲ್ಲೇ ಹಿರಿಯರೊಬ್ಬರು ಗದ್ದೆಗಳಲ್ಲಿ ದೀಪ ಹಚ್ಚಿದ ನಂತರವೇ ಎಲ್ಲರೂ ಕುಳಿತು ಊಟ ಮಾಡುವ ಎಂಬ ಉದ್ಗಾರವೆತ್ತುತ್ತಾರೆ. ಸರಿ, ಅದನ್ನೆ ಯಾರೂ ಇಲ್ಲವೆಂತ ಹೇಳಲಾರರು. ಮುಂದೆ ಮನೆಯವರೆಲ್ಲಾ ಒಂದು ದಿಕ್ಕಿಗೆ ಒಬ್ಬಿಬ್ಬರಂತೆ ದೀಪದ ಕೋಲುಗಳನ್ನು ಹಿಡಿದುಕೊಂಡು ಹೊರಡುತ್ತಾರೆ. ದೀಪ ಹಚ್ಚುವ ಆನಂದ, "ದೀಪ್ರ ದೀಪೋಳಿಗೇ" ಎಂಬ ಸಮೂಹ ಕೂಗಾಟದಲ್ಲಿ ಭಾಗವಹಿಸುವ ಸಲುವಾಗಿ ನಮ್ಮ ಕಪಿಸೈನ್ಯವೂ ಹೊರಡು ತ್ತದೆ. ಒಂದು ಗದ್ದೆ ಕೋಗಿನ ಎಲ್ಲಾ ರೈತರೂ ದೀಪಗಳನ್ನು ಹಚ್ಚಿಟ್ಟ ದೃಶ್ಯ ನಯನ ಮನೋಹರವಾಗಿರುತ್ತದೆ. ದೀಪ ಹಚ್ಚಿ ಬಂದ ನಂತರವೇ ಕೈಕಾಲು ತೊಳೆದುಕೊಂಡು ಎಲ್ಲರೂ ಒಟ್ಟಾಗಿ ಊಟಕ್ಕೆ ಕುಳಿತುಕೊಳ್ಳುವುದು. ದೀಪಾವಳಿಯ ಸಂಭ್ರಮದಲ್ಲೂ ಹೊಟ್ಟೆ ಹಸಿದುಕೊಂಡಿರುವುದು ನಮ್ಮಲ್ಲನೇಕರಿಗೆ ಸರಿಯೆನಿಸುತ್ತಿರಲಿಲ್ಲ.

ದೀಪಾವಳಿಯಲ್ಲಿನ ಮತ್ತೊಂದು ಸಡಗರವೆಂದರೆ ಬಲಿಪಾಡ್ಯಮಿ ದಿನದಿಂದಲೇ "ಬಲೀಂದ್ರ ಇಡುವುದು" ಅಥವಾ "ಕೆರಕಲು ಹೂಡುವುದು" ಎಂಬ ಪದ್ಧತಿ, ಮನೆಯ ಎಲ್ಲಾ ಪ್ರಮುಖ ಬಾಗಿಲುಗಳ ಎದುರಿಗೆ ಎರಡು ಕಡೆಗಳಲ್ಲಿ ಸಣ್ಣ ಬಾಳೆ ಎಲೆಗಳಲ್ಲಿ ಹಸಿ ಸೆಗಣಿಯ ಪಟ್ಟೆಗಳನ್ನಿಟ್ಟು ಅವುಗಳಿಗೆ ನೆಲ್ಲಿ ಕಾಯಿ, ಹೂವುಗಳು ಸಿಕ್ಕಿಸಿ ಇಡು ವುದು. ಅದು ಬಲೀಂದ್ರನ ಪ್ರೀತಿತ್ಯಾರ್ಥವೆಂಬ ನಂಬಿಕೆ. ಆದರೆ ಸ್ವಾರಸ್ಯವಿರುತ್ತಿ ದ್ದುದು ಒಬ್ಬರು ಇನ್ನೊಬ್ಬರು ಸಂಭೋದಿಸಿ ಕರೆದಾಗ 'ಆ, ಓ' ಎಂದು ಮರು ನುಡಿ ದರೆ 'ಕೆರೆಕ' ಎಂದು ಹೇಳಿ ತಮಾಷೆ ಮಾಡುವುದು. ಇದೊಂದು ಖುಷಿ ಕೊಡುವ ಪ್ರಸಂಗವಾಗಿ ಪರಿಣಮಿಸಿ ಒಬ್ಬೊಬ್ಬರು ಎಷ್ಟು ಸಾರಿ ಅದರಲ್ಲಿ ಜಯಶೀಲರಾದರೆಂದು ಲೆಕ್ಕ ಹಾಕುವುದು.

ದೀಪಾವಳಿ ಹಬ್ಬದ ಮೂರನೆ ದಿನವನ್ನು "ವರ್ಷ ತೊಡಕು" ಎಂದು ಆಚರಿಸುವುದು ಮಲೆನಾಡಿನಲ್ಲಿ ವ್ಯಾಪಕವಾಗಿ ಆಚರಣೆಯಲ್ಲಿದೆ. ವರ್ಷ ತೊಡಕಿನ ದಿನ ನಡೆದ ವಿಶೇಷ ಸಂಗತಿಗಳೆಲ್ಲಾ ದುಃಖ, ಸಂತೋಷಗಳು ಸೇರಿದಂತೆ ಎಲ್ಲವೂ ವರ್ಷವೆಲ್ಲಾ ವ್ಯಕ್ತಿಯ ಜೀವನದಲ್ಲಿ ಜರುಗುತ್ತವೆಂಬ ನಂಬಿಕೆ ಎಲ್ಲರಲ್ಲೂ ಇರುವಂತಿದೆ. ಆದುದರಿಂದ ಆ ದಿನ ಒಳ್ಳೆಯ ಭಕ್ಷ್ಯ ಭೋಜ್ಯಗಳನ್ನುಂಡು ಸಂತೋಷವಾಗಿ ಕಾಲ ಕಳೆಯಲು ಪ್ರಯತ್ನಿಸು ತ್ತಾರೆ. ಆ ದಿನವೂ ದೇವರ ಪೂಜೆ, ಪಿತೃಗಳಿಗೆ ಎಡೆ ಇಡುವಂಥಾ ಸಂಪ್ರದಾಯ ಗಳಿರುತ್ತವೆ.

## ಅಂಟಿಗೆ ಪೆಂಟಿಗೆ

ದೀಪಾವಳಿ ಹಬ್ಬದ ಸಯಮದಲ್ಲಿ ಮಲೆನಾಡಿನ ಜಾನಪದ ಸಂಪ್ರದಾಯವೊಂದು ಬಹಳ ಹಿಂದಿನಿಂದಲೂ ಮುಂದುವರಿದುಕೊಂಡು ಬಂದಿದೆ. ಹಬ್ಬ ಮೊದಲಾಗುವುದಕ್ಕೆ ಹಲವಾರು ದಿನಗಳಿಗೆ ಮೊದಲೇ ಈ ಸಂಪ್ರದಾಯದ "ಅಂಟಿಗೆ-ಪೆಂಟಿಗೆ' ತಂಡದವರು ಅದಕ್ಕೆ ಸಂಬಂಧಿಸಿದ ಹಾಡುಗಳನ್ನು ಜೊತೆಗೂಡಿ ಹಾಡುವ ಅಭ್ಯಾಸಕ್ಕಿಳಿಯುತ್ತಾರೆ. ಸಾಮಾನ್ಯವಾಗಿ ಹಬ್ಬದ ದಿನವೇ ಗ್ರಾಮದ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರ ಮಾಡಿ ಜ್ಯೋತಿ ಬೆಳಗಿಸಿಕೊಂಡು ಹಳ್ಳಿಯ ಮನೆ ಮನೆಗಳಿಗೆ ಹಾಡು ಹೇಳುತ್ತಾ ಸಂಚಾರ ಮಾಡುತ್ತಾರೆ. ರಾತ್ರಿ ಸುಮಾರು 8-10 ಗಂಟೆಗೆ ತಿರುಗಾಟ ಹೊರಟ ಸುಮಾರು ಎಂಟು-ಹತ್ತು ಜನರ ತಂಡ ದಾರಿಯುದ್ದಕ್ಕೂ ಹಾಡಿಕೊಳ್ಳುತ್ತ ದೀಪ್‌ದೀಪೋಳಿಗೆ ಎಂದು ಘೋಷಣೆಗಳನ್ನು ಕೂಗುತ್ತಾ ನಡೆಯುತ್ತಾರೆ. ಮನೆಗೆ ಸುಮಾರು ಅರ್ಧ- ಒಂದು ಫರ್ಲಾಂಗು ದೂರದಲ್ಲಿದ್ದಾಗಲೇ, ತಂಡದವರ ಆಗಮನದ ಸೂಚನೆ ತಿಳಿಯುತ್ತದೆ. ಮನೆಯವರೆಲ್ಲಾ ನಿದ್ದೆಯಿಂದ ಎದ್ದು ಜ್ಯೋತಿಯನ್ನು ಸ್ವಾಗತಿಸಲು ಅಣಿ ಮಾಡಿಕೊಳ್ಳುತ್ತಾರೆ. ಅಂಟಿಗೆ ಪೆಂಟಿಗೆ ತಂಡದವರು ರಾತ್ರಿ ಬರಬಹುದೆಂಬ ನಿರೀಕ್ಷೆಯಿಂದ ನಾವು ಬಾಲಕರೆಲ್ಲಾ ಅರನಿದ್ರೆಯಲ್ಲಿರುತ್ತಿದ್ದೆವು. ಅವರ ಹಾಡುಗಳನ್ನು ಕೇಳಬೇಕೆಂಬ, ಅವರ ಹಾವ ಭಾವ-ವೇಷ ಭೂಷಣಗಳನ್ನು ನೋಡಬೇಕೆಂಬ ಕುತೂಹಲ ನಮಗೆ. ಮನೆಯ ಹೆಬ್ಬಾಗಿಲಿಗೆ ಅವರು ಬರುತ್ತಲೇ ಬಾಗಿಲನ್ನು ತೆಗೆದು ಮನೆಯವರು ತಯಾರಿಸಿಕೊಂಡಿರುವ ಜ್ಯೋತಿಗೆ ತಂಡದವರ ಜ್ಯೋತಿಯಿಂದ ದೀಪ ಹತ್ತಿಸಿಕೊಳ್ಳುತ್ತಾರೆ. ತಂಡದ ಒಂದಿಬ್ಬರು ರಾಗವಾಗಿ ಹಾಡಿದ್ದನ್ನು ಇನ್ನುಳಿದವರು ಮತ್ತೆ ಹಾಡುವುದು ತುಂಬಾ ಸುಶ್ರಾವ್ಯವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಅಂಟಿಗೆ ಪೆಂಟಿಗೆ ಸಂಪ್ರದಾಯ ಜಾನಪದ ಕವಿಗಳ-ಸಾಹಿತಿಗಳ ಗಮನಹರಿದಿದ್ದು ಆ ಹಾಡುಗಳ ಹಲವು ಸಂಗ್ರಹಗಳು ಪ್ರಕಟವಾಗುತ್ತಿರುವುದು ಈ ದಿಸೆಯಲ್ಲಿ ಒಂದು ಶುಭ ಸೂಚನೆ.

## ಗೌರಿ ಹಬ್ಬ

ಗೌರಿ ಗಣೇಶನ ಹಬ್ಬಗಳಿಗೆ ನಮ್ಮಲ್ಲಿ ಅಷ್ಟೊಂದು ಪ್ರಾಮುಖ್ಯತೆ ಇಲ್ಲವೆಂದೇ ಹೇಳಬೇಕು. ಆದರೆ ಒಂದು ಮೋಜಿನ ಸಂಗತಿಯೆಂದರೆ ಆ ವರ್ಷ ಮದುವೆ ಶ್ರಾಯ ದಲ್ಲಿ ಸತಿಪತಿಗಳಾದವರನ್ನು ಹೆಣ್ಣಿನ ತಂದೆಯ ಮನೆಗೆ ವಿಶೇಷ ಆಹ್ವಾನದಿಂದ ಬರಮಾಡಿಕೊಂಡು ಸತ್ಕರಿಸಲಾಗುತ್ತದೆ. ಅದರಲ್ಲೂ ಗಂಡಿನ ಜೊತೆ ಬಂದ ನೆಂಟರು ತೆಂಗಿನಕಾಯಿಗಳನ್ನು ಬರಿಗೈಯಿಂದಲೇ ಗುದ್ದಿ ಒಡೆಯುವ ಸ್ಪರ್ಧೆ ಅತ್ಯಂತ ಮೋಜಿನದ್ದಾಗಿದ್ದು, ನಾವೆಲ್ಲಾ ತುಂಬಾ ನಲಿದಾಡುವ ಪ್ರಸಂಗವಾಗುತ್ತಿದ್ದುದನ್ನು ಜ್ಞಾಪಿಸಿಕೊಳ್ಳಬಹುದು.

ಯುಗಾದಿ ಹಬ್ಬ ನನಗೆ ಬಾಲ್ಯದಲ್ಲಿ ಅಷ್ಟೇನೂ ಮೋಜಿಸುತ್ತಿರಲಿಲ್ಲ. ಹೊಸಬಟ್ಟೆ ದೊರೆಯುತ್ತಿದ್ದುದು, ಬೇವುಬೆಲ್ಲ ಸವಿಯುವುದು ಮಾತ್ರ ಹಿತವೆನಿಸುತ್ತಿತ್ತು. ಜೊತೆಗೆ ಹಣೆ ನಡುವೆ ಗೇರು ಕಾಯಿಯ ರಸ (ಮಾಮೂಲಿ ಗೇರುಬೀಜ ಒಂದು ಬಗೆಯ ರೂಪಾಂತರ) ದಬ್ಬಣ ಕಡ್ಡಿ ಮೂಲಕ ಹೊರತೆಗೆದು ಹಣೆಗೆ ಬೊಟ್ಟಿನ ರೀತಿಯಲ್ಲಿ ಹಚ್ಚಿಕೊಳ್ಳುವುದು ನಮಗೆ ಅತ್ಯಂತ ಖುಷಿ ಕೊಡುವ ಸಂದರ್ಭವಾಗುತ್ತಿತ್ತು. ಆದರೆ ಮುಂದಿನ ಒಂದೆರಡು ದಿನಗಳಲ್ಲೇ ಆ ಜಾಗ ಸುಟ್ಟಂತಾಗಿ ಗಾಯವಾಗಿ ನೋವುನ್ನು ಅನುಭವಿಸಬೇಕಾಗುತ್ತಿತ್ತು. ಅದು ವಾಸಿಯಾಗಿಲು ಒಂದೆರಡು ವಾರ ಹಿಡಿಯುತ್ತಿತ್ತು. ಕೆಲವರ ಹಣೆಯಲ್ಲಿ ಅದರಿಂದಾದ ಗಾಯದ ಕಲೆ ಉಳಿದುಬಿಡುತ್ತಿತ್ತು.

## ದೈವದ ಹರಕೆ

ಮಲೆನಾಡಿನ ರೈತಾಪಿ ಜನರ ಇನ್ನೊಂದು ವಿಶೇಷ ಆಚರಣೆಯೆಂದರೆ ಪ್ರತಿವರ್ಷ ನಡೆಯುವ ದೈವದ ಹರಕೆಗಳು, ಮೂಢನಂಬಿಕೆ ಮತ್ತು ಅಂಧಶ್ರದ್ಧೆಗಳು ತಾಂಡವವಾಡುತ್ತಿದ್ದ ಆ ಕಾಲದಲ್ಲಿ ಅವರೆಲ್ಲಾ ಹಲವು ದೈವ, ಭೂತ, ಚೌಡಿ, ಮಾರಮ್ಮ, ಬ್ರಹ್ಮ ಮುಂತಾದ ಕೆಳವರ್ಗದ ದೈವಗಳಲ್ಲಿ ಅಪಾರ ನಂಬಿಕೆ. ಅವರ ಹೊಲಗದ್ದೆಗಳಲ್ಲಿ ಬೆಳೆಯನ್ನು ಕಾಪಾಡುವುದು, ಜನ ಜಾನುವಾರಗಳು ಆರೋಗ್ಯದಿಂದಿರುವುದು ಮುಂತಾದವುಗಳಿಗೆಲ್ಲಾ ಈ ಕ್ಷುದ್ರ ದೇವತೆಗಳ ಕೃಪೆ ಅತ್ಯವಶ್ಯಕವೆಂಬ ಭಾವನೆ ಅವರಲ್ಲಿ ತಲೆತಲಾಂತರದಿಂದ ನೆಲೆಯೂರಿತ್ತು. ಆ ದೇವತೆಗಳನ್ನು ಸಂತೃಪ್ತಿಯಿಂದಿರಿಸಲು ಪ್ರತಿವರ್ಷ ಕಾಲಕಾಲಕ್ಕೆ ಸರಿಯಾಗಿ ಅವುಗಳಿಗೆ ಸರಿಯಾದ ಪೂಜೆ ಪುನಸ್ಕಾರ, ಬಲಿಕೊಡುವುದು ಮುಂತಾದ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಾರೆ. ಈ ಕ್ರಮಗಳಿಗೆ "ದೈವದ ಹರಕೆ" ಮಾಡುವುದು ಎಂದೂ ಹೇಳುತ್ತಾರೆ.

ಸಾಮಾನ್ಯವಾಗಿ ಪ್ರತಿವರ್ಷ ಮುಂಗಾರು ಮಳೆ ಶುರುವಾಗುವುದಕ್ಕೆ ಕೆಲವು ದಿನಗಳಿರುವಾಗಲೇ ಈ ಕಾರ್ಯಗಳನ್ನು ಜರುಗಿಸುತ್ತಾರೆ. ಮಲೆನಾಡಿನ ಪ್ರತಿಯೊಂದು ಕುಟುಂಬ ಇಲ್ಲವೆ ಹಳ್ಳಿಗಳಿಗೆ ಸೀಮಿತವಾದ ದೈವಗಳಿರುತ್ತವೆ. ಅವುಗಳಲ್ಲಿ ಪ್ರತಿಯೊಂದಕ್ಕೂ ವಿಶಿಷ್ಟವೆನ್ನಬಹುದಾದ ಹರಕೆಯ ರೀತಿನೀತಿಗಳಿರುತ್ತವೆ. ಬಹುಪಾಲು ಎಲ್ಲವಕ್ಕೂ ನಿಗದಿತ ಒಂದು ದಿನ ಪೂಜೆಯ ಏರ್ಪಾಡು ಮಾಡಲಾಗುತ್ತದೆ.

ಮೊದಲಿಗೆ ಈ ದೈವಗಳಿಗೆ ಬ್ರಾಂಬರಿಂದ ಪೂಜೆ ಜರುಗಬೇಕಾಗುತ್ತದೆ. ಪ್ರತಿ ಯೊಂದು ಹಳ್ಳಿಗೂ ನಿಯಮಿತವಾದ ಇಂತಹ ಕಾರ್ಯಗಳನ್ನು ಜರುಗಿಸುವ ಬ್ರಾಹ್ಮಣ ಕುಟುಂಬಗಳಿರುತ್ತವೆ. ಅಲ್ಲದೆ ಅವರು ವಾರ, ತಿಥಿ, ಘಳಿಗೆ ಮುಹೂರ್ತಗಳನ್ನು ನಿಗದಿಮಾಡಿಸಿದ ದಿನವೇ ಈ ಹರಕೆಗಳು ಜರುಗುವುದು. ಆ ದಿನ ಅವರು ಮಡಿ ಯಿಂದ ಬಂದು ಹಳ್ಳಿ ವಿವಿಧ ಕಡೆ ನೆಲೆಯಾಗಿರುವ ದೈವದ ಬನಗಳಲ್ಲಿರುವ ದೇವರ

ಕಲ್ಲುಗಳನ್ನು ಶುಚಿ ಮಾಡಿ ಪೂಜೆ ನಡೆಸುತ್ತಾರೆ. ಅವುಗಳಿಗೆ ಸಮರ್ಪಿಸಬೇಕಾದ 'ಎಡೆ'ಗಳನ್ನು ಅವರ ಮನೆಯಲ್ಲೇ ತಯಾರಿಸಿ ತಂದಿರುತ್ತಾರೆ ; ಇಲ್ಲವೆ ದೈವದ ಬನದಲ್ಲೇ ಅಡಿಗೆ ಮಾಡಿ ತಯಾರಿಸುತ್ತಾರೆ. ಅವರ ಪೂಜಾಕಾರ್ಯಗಳು ಮುಗಿದ ಮೇಲೆ ತೀರ್ಥಪ್ರಸಾದ ಗಳನ್ನು ಹಂಚಿ ನಿರ್ಗಮಿಸುತ್ತಾರೆ.

ಅದಾದ ನಂತರ ಪ್ರತಿಯೊಂದು ಕುಟುಂಬದವರೂ ದೈವಗಳಿಗೆ ಸಲ್ಲಬೇಕಾದ ಪ್ರತ್ಯೇಕ ಹರಕೆಗಳನ್ನು ಸಲ್ಲಿಸುವ ಕಾರ್ಯಕ್ರಮವಿರುತ್ತದೆ. ಕೆಲವರು ಆ ದಿನ ಮಿಂದು (ಸ್ನಾನ ಮಾಡಿ) ಮಡಿ ಬಟ್ಟೆ ಧರಿಸಿ ಅವುಗಳಿಗೆಲ್ಲಾ ಮತ್ತೊಮ್ಮೆ ಪೂಜೆ ಮಾಡುತ್ತಾರೆ. ಅಂತಿಮವಾಗಿ ದೈವಗಳಿಗೆ 'ಬಲಿ' ಕೊಡುತ್ತಾರೆ. ಅಂದರೆ ಪ್ರಾಣಿಗಳನ್ನು ಆ ದೈವದ ಕಲ್ಲಿನ ಎದುರು ಕತ್ತರಿಸಿ ಹಾಕುವುದು. ಆಯಾ ದೈವದ "ಶಕ್ತಿ" ಮತ್ತು ಯೋಗ್ಯತೆಗನು ಸಾರ ಕೋಳಿ ಅಥವಾ ಕುರಿಗಳ ಬಲಿ ಕೊಡುತ್ತಾರೆ. ಬಲಿಷ್ಠವೆಂದು ಪರಿಗಣಿಸಿದವು ಗಳಿಗೆ ಕೆಲವು ಮನೆಯವರೆ ಪ್ರತಿ ವರ್ಷ ಕುರಿಯನ್ನು ಬಲಿಕೊಡುವ ಪದ್ಧತಿ ಇರುತ್ತದೆ. ಅಷ್ಟೇನೂ ಪ್ರಭಾವಶಾಲಿ ಅಲ್ಲದ ದೈವಗಳು ಕೋಳಿ ಬಲಿಯಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ.

ಬಲಿಕೊಡುವ ದೃಶ್ಯ ಹೃದಯ ವಿದ್ರಾವಕವಾಗಿರುತ್ತಿತ್ತು. ಬಲಿಕೊಡುವ ಪ್ರಾಣಿಯನ್ನು ಒತ್ತಾಯದಿಂದ ಎಳೆತಂದು ಅದರ ಕುತ್ತಿಗೆಯನ್ನು ಹರಿತವಾದ ಖಡ್ಗದಿಂದ ಒಂದೇ ಸಾರಿಯ ಏಟಿಗೆ ಕಚಕ್ ಎಂದು ಕತ್ತರಿಸುವ ನಿಷ್ಣಾತರೇ ಇರುತ್ತಾರೆ. ಹುಡುಗರಾದ ನಮಗೆಲ್ಲಾ ಅದೆಲ್ಲಾ ಶುರುವಿನಲ್ಲಿ ಗಾಬರಿ ಹುಟ್ಟಿಸಿದ್ದರೂ ವರ್ಷಗಳು ಕಳೆದಂತೆ ಆ ದೃಶ್ಯ ನೋಡುವ ಅಭ್ಯಾಸ ಬೆಳೆದಿರುತ್ತದೆ. ಈಗ ಯೋಚಿಸಿದರೆ ಮಾತ್ರ "ಅಯ್ಯೋ ಪಾಪ" ಎನಿಸುತ್ತದೆ.

ಹೀಗೆ ದೈವಗಳಿಗೆ ಬಲಿಕೊಡುವ ಕಾರ್ಯ ಮುಗಿಯುವ ಹೊತ್ತಿಗೆ ಮಧ್ಯಾಹ್ನ 2-3 ಗಂಟೆಯ ಸಮಯವಾಗುತ್ತದೆ. ಅವುಗಳನ್ನೆಲ್ಲಾ ಒಂದೆಡೆ ಸೇರಿಸಿ, ಸಾಮೂಹಿಕವಾಗಿ 'ಹಸಿಗೆ' ಮಾಡುತ್ತಾರೆ. ಹಾಗೆ ದೊರೆತ ಮಾಂಸದ ಒಂದು ಭಾಗವನ್ನು ಬೇಯಿಸಿ ಕಡುಬು ಮತ್ತಿತರ ಭೋಜ್ಯಗಳನ್ನು ದೈವದ ಬನಗಳ ಹತ್ತಿರವೆ ಅಡಿಗೆ ಮಾಡುತ್ತಾರೆ. ಅವುಗಳನ್ನೆಲ್ಲಾ ಮತ್ತೆ ದೈವದ ಬನಗಳಿಗೆ ತೆಗೆದುಕೊಂಡು ಹೋಗಿ ಬಾಳೆಎಲೆ ಹಾಸಿ, ಪಕ್ಕದಲ್ಲಿ ಕಕ್ಕ ಹಚ್ಚಿಟ್ಟು ಬಡಿಸಿ ಪೂಜೆ ನಡೆಯುತ್ತದೆ.

ದೈವದ ಬನಗಳ ಹತ್ತಿರ ತಯಾರಿಸಿದ ಅಡುಗೆಯ ಊಟ ಅಲ್ಲಿಯೇ ತೆರಪಾದ ಜಾಗದಲ್ಲಿ ಮಾಡಲಾಗುತ್ತದೆ. ಈ ಅಡಿಗೆಯಲ್ಲಿ ಮನೆಯ ಹೆಂಗಸರ ಪಾತ್ರವಿರುವುದಿಲ್ಲ. ಎಲ್ಲಾ ಗಂಡಸರದ್ದೇ. ಜೊತೆಗೆ ನಾವು ಹುಡುಗರು ಮಕ್ಕಳೆಲ್ಲಾ ಸೇರಿರುತ್ತೇವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಚುಮು ಚುಮು ಮಳೆಯಲ್ಲಿ ಕುಳಿತು ಅಲ್ಲಿ ಊಟ ಮಾಡುವ ಆನಂದವನ್ನು ವಿವರಿಸುವುದು ಕಷ್ಟವೆ. ಅದೊಂದು ಈ ಕಾಲದಲ್ಲಿ ನಗರವಾಸಿಗಳು

ಜರುಗಿಸುವ ಪಿಕ್‌ನಿಕ್ ಎನ್ನಬಹುದು. ಇನ್ನೇನು ಬೇಸಗೆ ಕಳೆದು ಶಾಲೆಗಳು ಆರಂಭವಾಗುವ ಮೊದಲೇ ಜರುಗುತ್ತಿದ್ದ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನನಗೆ ಸಾಮಾನ್ಯವಾಗಿ ಸಾಧ್ಯವಾಗುತ್ತಿತ್ತು. ದೈವದ ಹರಕೆಯಂತಹ ಪದ್ಧತಿಗಳು ಈಗ ಹಿಂತಿರುಗಿ ನೋಡಿದಾಗ ಒಂದು ರೀತಿಯಲ್ಲಿ ಅನಾಗರೀಕ ಎಂದೆನಿಸಬಹುದಾದರೂ ಆ ಕಾಲದಲ್ಲಿ ಓರಗೆಯ ಮಕ್ಕಳೊಂದಿಗೆ ಅದರಲ್ಲಿ ಭಾಗವಹಿಸಿ ನಕ್ಕು ನಲಿದಾಡುತ್ತಿದ್ದುದು ಈಗಲೂ ಒಮ್ಮೊಮ್ಮೆ ನನ್ನ ಸ್ಮೃತಿಪಟಲದಲ್ಲಿ ಸುಳಿದು ಮಾಯವಾಗುತ್ತಿರುತ್ತದೆ.

ಹೀಗೆ ದೈವದ ಹರಕೆ ನಡೆದ ದಿನವೇ ಪ್ರತಿಯೊಬ್ಬರ ಮನೆಯಲ್ಲಿ ಗತಿಸಿದ ಪಿತೃಗಳಿಗೆ ಪೂಜಾ ಕಾರ್ಯಕ್ರಮ ಸಾಮಾನ್ಯವಾಗಿ ಆ ದಿನ ರಾತ್ರಿ ನಡೆಯುತ್ತದೆ. ಕೆಲವು ಕಡೆ ಅದನ್ನು "ಮಾವಳದ ಮನೆ" ಎನ್ನುತ್ತಾರೆ. ಪ್ರತಿಯೊಂದು ಮನೆಯವರೂ ಹಲವು ಕುರಿ-ಕೋಳಿಗಳನ್ನು ಬಲಿಕೊಟ್ಟಿರುವುದರಿಂದ ಸಾಕಷ್ಟು ಮಾಂಸವೂ ಶೇಖರಣೆಯಾಗಿರುತ್ತದೆ. ಅದೇ ಸಂದರ್ಭವನ್ನು ಹತ್ತಿರದ ನೆಂಟರಿಷ್ಟರನ್ನು ಆಹ್ವಾನಿಸಿ ಸತ್ಕರಿಸಲೂ ಸಹಾ ಬಳಸಿಕೊಳ್ಳಲಾಗುತ್ತದೆ. ಪ್ರತಿಯೊಂದು ಅಕ್ಕಪಕ್ಕದ ಹಳ್ಳಿಯವರು ಬೇರೆ ಬೇರೆ ದಿನಗಳಲ್ಲಿ ದೈವದ ಹರಕೆ - ಮಾವಳದ ಮನೆಗಳನ್ನು ಏರ್ಪಡಿಸಿಕೊಂಡು ಒಬ್ಬರ ಮನೆಯವರು ಇನ್ನೊಬ್ಬರ ಮನೆಯ ಊಟ ತಪ್ಪಿ ಹೋಗದಂತೆ ಎಚ್ಚರ ವಹಿಸುತ್ತಾರೆಂದು ಬೇರೆ ಹೇಳಬೇಕಾಗಿಲ್ಲ !

ಮಲೆನಾಡಿನ ಜನರು ಮಳೆಗಾಲದ ನಾಲ್ಕೈದು ತಿಂಗಳುಗಳ ಅವಧಿಯಲ್ಲಿ ಎಡೆಬಿಡದೆ ಬೋರೆಂದು ಸುರಿಯುತ್ತಿರುವ ಮಳೆಯಲ್ಲೂ ವ್ಯವಸಾಯದ ಕೆಲಸಕಾರ್ಯಗಳಲ್ಲಿ ಏಕಾಗ್ರಚಿತ್ತತೆಯಿಂದ ತೊಡಗಿಸಿಕೊಳ್ಳುವುದನ್ನು ಬರವಣಿಗೆಯಲ್ಲಿ ವಿವರಿಸಲಾಗದು. ಆ ಕಾಲದ ಚಳಿ, ಮಳೆ, ಬಿರುಗಾಳಿ, ಸಿಡಿಲು ಗುಡುಗುಗಳನ್ನು ಅವರೆಂದೂ ಲೆಕ್ಕಕ್ಕೆ ತೆಗೆದುಕೊಳ್ಳುವುದೇ ಇಲ್ಲ. ರಾಷ್ಟ್ರಕವಿ ಕುವೆಂಪು ತಮ್ಮ ಬಾಲ್ಯದಲ್ಲಿ ನೋಡಿ ಅನುಭವಿಸಿದ ಮಲೆನಾಡಿನ ರೈತರ ಬವಣೆಯನ್ನು ನೋಡಿಯೇ 'ನೇಗಿಲಯೋಗಿ' ಕವನವನ್ನು ಬರೆಯುವ ಸ್ಫೂರ್ತಿ ಬಂದಿರಬೇಕೆನಿಸುತ್ತದೆ. ಅಂತಹ ಅತಿ ಕಷ್ಟದ ಕೆಲಸಕಾರ್ಯಗಳಲ್ಲಿ ತೊಡಗಿದಾಗ ದೈಹಿಕವಾಗಿಯೇ ಅಲ್ಲದೆ ಮಾನಸಿಕವಾಗಿಯೂ ಯಾವುದೇ ಅಡಚಣೆಗಳು ಮೈದೋರದಂತಿರಲು ಮಲೆನಾಡಿಗರು ದೈವದ ಹರಕೆಯಂತಹಾ "ಯಜ್ಞ" ಮಾಡುತ್ತಿದ್ದರೆನಿಸುತ್ತದೆ.

# ಮದುವೆ ಮಹೋತ್ಸವಗಳು

ನಮ್ಮೂರಿನ ನೆನಪಿನಂಗಳದಿಂದ ಹೊರಬರುವ ಮೊದಲು ನನ್ನ ಬಾಲ್ಯದಿನಗಳಲ್ಲಿ ಜರುಗುತ್ತಿದ್ದ ಮದುವೆಗಳು ಮತ್ತು ಅವುಗಳಲ್ಲಿ ನಾನು ವಹಿಸುತ್ತಿದ್ದ ಪಾತ್ರದ ಬಗೆಗೆ ಪ್ರಸ್ತಾಪ ಮಾಡದಿರಲಾರೆ. ಮಲೆನಾಡಿನ ಆ ಕಾಲದ ಮದುವೆ ಸಮಾರಂಭಗಳು ಈಗ ಬಹಳಷ್ಟು ಮಾರ್ಪಾಡಾಗಿಬಿಟ್ಟಿವೆ. ಸುಮಾರು 2-3 ದಿನಗಳು ಶಾಸ್ತ್ರೋಕ್ತವಾಗಿ ನಡೆಯುತ್ತಿದ್ದ ಮದುವೆ ಈಗ ಕೇವಲ ಒಂದೇ ದಿನಕ್ಕೆ ಸೀಮಿತವಾಗಿವೆ. ಮದುವೆ ಮುಹೂರ್ತದ ಸಮಯದಲ್ಲಂತೂ ಅಜಗಜಾಂತರ ಬದಲಾವಣೆಯಾಗಿದೆ. ಮಲೆನಾಡಿಗರು ಹಿಂದೆ ಬಹುಪಾಲು 'ಗೋಧೂಳಿ' ಸಮಯವನ್ನು ಅತ್ಯಂತ ಪ್ರಶಸ್ತ್ಯವೆಂದು ಪರಿಗಣಿಸುತ್ತಿದ್ದರು. "ಗೋಧೂಳಿ"ಯೆಂದರೆ ಹೊರಗಡೆ ಮೇವಿಗಾಗಿ ಹೋಗಿದ್ದ ದನಕರುಗಳು ಮನೆಗೆ ಬರುವ ಮುಸ್ಸಂಜೆಯ ಕಾಲ. ಆದರೆ ಎಲ್ಲರ ಮದುವೆಗಳು ಅದೇ ಸಮಯದಲ್ಲಿ ಜರುಗುತ್ತಲೂ ಇರಲಿಲ್ಲ. ಬಹುಪಾಲು ಮದುವೆ ಮುಹೂರ್ತ ರಾತ್ರಿ ಇಲ್ಲವೆ ಮಧ್ಯರಾತ್ರಿಯ ನಂತರವೇ ನಡೆಯುತ್ತಿದ್ದವು. ಹಗಲಿನಲ್ಲಿ ಮದುವೆಗಳೂ ತೀರಾ ಅಪರೂಪವೆಂದೇ ಹೇಳಬಹುದು. ಬಹುಶಃ ತೀರಾ ಬಡವರ ಮನೆಯಲ್ಲಿ ಹಗಲು ಹೊತ್ತಿನಲ್ಲಿ ಇಂಥಾ ಮದುವೆಗಳು ಜರುಗುತ್ತಿದ್ದುದು. "ಅಂತೂ ಇಂತೂ (ಬಡ) ಪುಟ್ಟಿ ಮಗಳಿಗೆ ಹಗಲು ಧಾರೆ" ಎಂಬ ಜನಪ್ರಿಯ ನಾಣ್ನುಡಿ ಪ್ರಚಲಿತವಿತ್ತು. ಕಾರಣವಿಷ್ಟೇ. ಹಗಲು ಧಾರೆಯಾದರೆ ದಿಬ್ಬಣದವರಿಗೆ ಮಧ್ಯಾಹ್ನ ಒಂದೇ ಊಟ ಹಾಕಿದರೆ ಸಾಕಾಗುತ್ತಿತ್ತು. ಗೋಧೂಳಿ ಅಥವಾ ರಾತ್ರಿ ಧಾರೆಯಾಗುವುದಾದರೆ ಸಾಯಂಕಾಲದ ಸಮಯದಲ್ಲಿ ಆಗಮಿಸುವ ದಿಬ್ಬಣದವರಿಗೆಲ್ಲಾ ಕುಡಿಯಲು ಪಾನಕ ಸಮಾರಾಧನೆಯಾಗಬೇಕು ; ರಾತ್ರಿ ಭೋಜನ ಏರ್ಪಾಡು ಮಾಡಬೇಕು; ಎಲ್ಲಕ್ಕಿಂತ ಮಿಗಿಲಾಗಿ ಬಂದ ನೆಂಟರಿಗೆಲ್ಲಾ ರಾತ್ರಿ ಮಲಗಲು ಚಾಪೆ, ಜಮಖಾನೆ ಹಾಗೂ ಸ್ಥಳಾವಕಾಶ ಮಾಡಿಕೊಡಬೇಕು. ಮರುದಿನ ಬೆಳಿಗ್ಗೆ ಕಾಫಿ, ತಿಂಡಿ, ಮಧ್ಯಾಹ್ನದ ಭೋಜನಗಳನ್ನೂ ಏರ್ಪಡಿಸಬೇಕಾಗುತ್ತಿತ್ತು. ಬಹುಶಃ ಇಂತಹ ಹೈರಾಣದ ಕೆಲಸ ಬೇರೊಂದಿರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಅವುಗಳಲ್ಲಿ ಅಪ್ಪಿತಪ್ಪಿ ಹೆಚ್ಚು ಕಡಿಮೆ ಯಾದರೆ ಬೀಗರ ಕಡೆಯಿಂದ ಮೂದಲಿಕೆಗಳ ಸುರಿಮಳೆ. ನನಗೆ ಸಾಮಾನ್ಯವಾಗಿ ಜ್ಞಾಪಕ ವಿರುವ ಘಟನೆಯೆಂದರೆ ದೂರದ ಊರಿಂದ ದಿಬ್ಬಣದವರನ್ನು ಕರೆತಂದ ಎತ್ತಿನಗಾಡಿ ಗಳ ಚಾಲಕರು ಮತ್ತು ಎತ್ತುಗಳನ್ನು ಉಪಚರಿಸುವುದೇ ಒಂದು ಬೃಹತ್ ಸಮಸ್ಯೆ

ಯಾಗುತ್ತಿತ್ತು. ಅವರವರ ಮನೆಗಳಲ್ಲಿ ಒಣ ಹುಲ್ಲಿಗೆ ಗತಿ ಇಲ್ಲದಿದ್ದರೂ ದಿಬ್ಬಣಕ್ಕೆ ಬಂದಾಗ ಸೇರುಗಟ್ಟಲೆ ಬೇಯಿಸಿದ ಹುರುಳಿ ಬೇಕೆಂದು ವಾದ ವಿವಾದಯೆಬ್ಬಿಸುತ್ತಿದ್ದರು. ಯಾರಾದರೂ ಬಾಯಿತಪ್ಪಿ ಚಾಲಕರನ್ನು "ಗಾಡಿ ಹೊಡೆಯೋರು" ಎಂದು ಸಂಬಂಧಿಸಿದರೆಂದರೆ ದೊಡ್ಡ ರಂಪಾಟವೇ ಆಗಿಬಿಡುತ್ತಿತ್ತು. ವಾಸ್ತವವಾಗಿ ಅವರೆಲ್ಲಾ ಗಾಡಿಗಳನ್ನು ಚಲಿಸುವ ಉದ್ಯೋಗದವರೇ ಆಗಿದ್ದರೂ (ಈಗಿನ ಕಾರು - ಟ್ಯಾಕ್ಸಿ ಡ್ರೈವರ್‌ಗಳಂತೆ) ಅವರನ್ನು ಗಾಡಿ ಹೊಡೆಯುವವರು ಎಂದು ಸಂಬೋಧಿಸುವುದು ಅವಹೇಳನಕರವೆಂದು ಮುನಿಸಿ ಕೊಂಡು ಭೋಜನದಲ್ಲಿ ಪಾಲ್ಗೊಳ್ಳಲು ನಿರಾಕರಿಸಿಬಿಡುತ್ತಿದ್ದರು. ಗಂಡಿನ ಕಡೆಯ ದಿಬ್ಬಣದ ಜೊತೆ ಬಂದವರಾರಿಗೂ ಅವಹೇಳನವಾಗದಂತೆ ನಡೆದುಕೊಳ್ಳುವುದು ಹೆಣ್ಣಿನ ಮನೆಯವರ ಆದ್ಯಕರ್ತವ್ಯವೆಂದು ಭಾವಿಸಲಾಗಿತ್ತು. ಚಾಲಕರ ಮನಸ್ಸೊಲಿಸಿ ಅವರು ಮದುವೆಯಲ್ಲಿ ಭಾಗವಹಿಸುವಂತೆ ಪುಸಲಾಯಿಸಲು ಮದುವೆ ಮನೆ ಯಜಮಾನರೇ ಬಂದು ಸಾಂತ್ವನಗೊಳಿಸಬೇಕಾಗುತ್ತಿತ್ತು! ಕೆಲಸಾರಿ ಅವರೂ ವಿಫಲವಾಗಿ ಚಾಲಕರೆಲ್ಲಾ ಉಪವಾಸವಿದ್ದು, ಇಡೀ ಸಂತಸದ ವಾತಾವರಣ ಹುಳಿ ಹಿಂಡಿಬಿಟ್ಟಂತಾಗುತ್ತಿತ್ತು.

ಧಾರೆಯೆರೆಯುವ ಮುಹೂರ್ತವನ್ನು ನಿರ್ಧರಿಸುವ ರೀತಿ ನಮಗೆ ವಿಚಿತ್ರವೆನಿಸು ತ್ತಿತ್ತು. ಲಗ್ನದ ವಿವಿಧ ಕಾರ್ಯಗಳನ್ನು ನೆರವೇರಿಸುವ ಜೋಯಿಸರೂ ಸಾಮಾನ್ಯವಾಗಿ ನಸುಕಿನ ಹೊತ್ತಿಗೆ ಬರುತ್ತಾರೆ. ಧಾರೆಯ ಘಳಿಗೆಯನ್ನು ನಿರ್ಧರಿಸಲು ಅಗಲವಾದ ಪಾತ್ರೆಯೊಂದರಲ್ಲಿ ನೀರನ್ನು ತುಂಬಿಸುತ್ತಾರೆ. ಅದರೊಳಗಡೆ ಅಗಲವಾದ ತೆಂಗಿನ ಚಿಪ್ಪು ಇಲ್ಲವೆ ಅದೇ ಆಕಾರದ ಹಿತ್ತಾಳೆ ಅಥವಾ ತಾಮ್ರದ ಬಟ್ಟಲನ್ನು ತೇಲಿಬಿಡುತ್ತಾರೆ. ಚಿಪ್ಪು ಅಥವಾ ಬಟ್ಟಲಿನ ತಳಭಾಗದಲ್ಲಿ ಸಣ್ಣದೊಂದು ರಂಧ್ರವಿರುತ್ತದೆ. ಪಾತ್ರೆಯೊಳಗಿನ ನೀರು ನಿಧಾನವಾಗಿ ಚಿಪ್ಪಿನ ಒಳಗೆ ಹರಿಯುತ್ತಿರುತ್ತದೆ. ಅದು ತುಂಬಿ ನೀರಿನಲ್ಲಿ ಮುಳುಗಿ ದರೆ ಒಂದು ಘಳಿಗೆಯೆಂದು ಹೇಳುತ್ತಾರೆ. ಕಾಲ ಮುಂದುವರಿದಂತೆಲ್ಲಾ ಜೋಯಿಸರ ಕೈಯಲ್ಲಿ ವಾಚುಗಳು ಕಾಣಲಾರಂಭಿಸಿದವು. ಅಂತಹವರು ಯಾವುದೋ ಕಾಲಕ್ಕೆ ಬಂದು ಘಳಿಗೆಯ ಬಟ್ಟಲನ್ನು ಆರಂಭಿಸುತ್ತಿದ್ದರು. ಆ ಬಗೆಗೆ ನಮ್ಮ ಯುವಕರಲ್ಲೇನೇಕರು ಅವರೊಡನೆ ವಾದ ವಿವಾದಕ್ಕಿಳಿಯುತ್ತಿದ್ದರು - ಅದು ಶಾಸ್ತ್ರೋಕ್ತವಾದುದಲ್ಲ ಎಂಬ ಕಾರಣಕ್ಕಾಗಿ!

ಆ ಕಾಲದ ಮದುವೆ ಚಪ್ಪರ ಮತ್ತು ಮಂಟಪಗಳೂ ಹಸಿರು ತಳಿರು ತೋರಣಗಳಿಂದ ಅಲಂಕೃತವಾಗಿರುತ್ತಿದ್ದವು. ಸ್ವಲ್ಪ ಸ್ಥಿತಿವಂತರಾಗಿದ್ದರೆ ವಿಶಾಲವಾದ ಅಂಗಳದ ತುಂಬಾ ಹಸಿರು ವಾಣಿ ಚಪ್ಪರ ಹಾಕಿ, ಸಿಂಗರಿಸಿರುತ್ತಾರೆ. ಧಾರೆಯೆರೆಯುವ ಮಂಟಪವನ್ನು ಹತ್ತಿರದ ಪೇಟೆಯೊಂದರಿಂದ ಅಂತಹ ಕೆಲಸದಲ್ಲಿ ಪಳಗಿದವರೇ ಬಂದು ಬಣ್ಣ ಬಣ್ಣದ ಕಾಗದ, ಮಿರಿ ಮಿರಿಯುವ ಬೇಗಡೆಗಳಿಂದ ತಯಾರಿಸಿರುತ್ತಾರೆ. ಚಪ್ಪರ ಹಾಗೂ ಮಂಟಪದ ತುಂಬಾ ಹೂವು ಹಣ್ಣಿನ ಗೊಂಚಲುಗಳು, ಹಲಸು ಮಾವಿನ ಗುಚ್ಛಗಳನ್ನೇ ಇಳಿಯ

ಬಿಟ್ಟು ಅಲಂಕರಿಸಿರುತ್ತಾರೆ. ಆ ದೃಶ್ಯವೇ ನಯನ ಮನೋಹರ. ಪ್ರಸ್ತುತ ಅಂತಹ ದೃಶ್ಯವನ್ನು ಕಾಣುವುದು ತುಂಬಾ ಅಪರೂಪ. ಬಣ್ಣ ಬಣ್ಣದ ಷಾಮಿಯಾನಗಳು ಹಸಿರುವಾಣಿ ಚಪ್ಪರದ ಸ್ಥಾನವನ್ನೀಗ ಆಕ್ರಮಿಸಿಕೊಂಡಿವೆಯಾದರೂ ಅಂದಿನ ವೈಭವ ಇನ್ನೆಲ್ಲಿ ?

ಗಂಡಿನ ಮನೆಯಿಂದ ದಿಬ್ಬಣ ಸಾಗಿ ಬರುವುದೇ ಒಂದು ನಯನ ಮನೋಹರ ದೃಶ್ಯ. ಹತ್ತಿರದ ಊರಿನವರಾದರೆ ಕಾಲ್ನಡಿಗಯಲ್ಲೇ ದಿಬ್ಬಣ ಬರುತ್ತದೆ. ವಿವಿಧ ವಯಸ್ಸಿನ ಹೆಂಗಸರು, ಗಂಡಸರು, ಬಣ್ಣ ಬಣ್ಣದ ಪೇಟ ರುಮಾಲು ಧರಿಸಿಕೊಂಡು ಸಾಲಾಗಿಯೋ, ಗುಂಪು ಗುಂಪಾಗಿಯೋ ಸಾಗಿಬರುವುದು ಕಣ್ಮನಗಳಿಗೆ ಆನಂದ. ಜೊತೆಗೆ ಕೊಂಬು, ಕಹಳೆ ವಾದ್ಯ, ವಾಲಗ, ಕೆಲಸಾರಿ ಸಮವಸ್ತ್ರ ಧರಿಸಿದ ಬ್ಯಾಂಡ್ ಸೆಟ್ಟಿನವರ ಮಂಗಳವಾದ್ಯದ ಕಲರವ ಇಡೀ ಉತ್ಸವಕ್ಕೆ ಮೆರಗು ಕೊಟ್ಟಂತಿರುತ್ತದೆ. ಜೊತೆಗೆ ಕದಿನಿ, ಮದ್ದುಗುಂಡುಗಳ ಸಿಡಿತ, ಯಾವುದೋ ಪಾಳೇಗಾರರು ವೈರಿ ಪ್ರದೇಶದ ಮೇಲೆ ದಂಡೆತ್ತಿ ಹೋಗುತ್ತಿರುವರೋ ಎಂದಿನಿಸದಿರಲಾರದು. ವಧುವಿನ ಮನೆ ಸಮೀಪಿಸುತ್ತಿದ್ದಂತೆಲ್ಲಾ ಈ ವಾದ್ಯ, ಮದ್ದುಗುಂಡುಗಳ ನಿನಾದ ಗಗನಕ್ಕೇರುತ್ತದೆ.

ಇದಲ್ಲದೆ ವರನ ಪ್ರಯಾಣಕ್ಕೆ ಪ್ರತ್ಯೇಕ ವ್ಯವಸ್ಥೆಯಿರುತ್ತದೆ. ಆ ಕಾಲದಲ್ಲಿ ಕೆಲವು ಹಳ್ಳಿಗಳಲ್ಲಿ ದಂಡಿಗೆ (ಪಲ್ಲಕ್ಕಿ)ಗಳಿರುತ್ತಿದ್ದು, ವರನನ್ನ ಅದರಲ್ಲಿ ಕುಳ್ಳಿರಿಸಿಕೊಂಡು ಹಿಂದೆ ಮತ್ತು ಮುಂದೆ 3-4 ಜನ ಹೆಗಲ ಮೇಲೆ ಹೊತ್ತು ಸಾಗುತ್ತಿದ್ದರು. ದಣಿವನ್ನು ಸಹಿಸಿಕೊಳ್ಳಲು ಅವರು ಹಾಡು ಹೇಳಿಕೊಂಡು ನಡೆಯುವ ರೀತಿಯೂ ಆ ಮೆರವಣಿಗೆಯ ಕಲರವಕ್ಕೆ ತನ್ನದೇ ಆದ ಮೆರಗು ಕೊಡುತ್ತಿತ್ತು.

ದಿಬ್ಬಣವು ವಧುವಿನ ಮನೆಯ ಹತ್ತಿರ ಹತ್ತಿರಕ್ಕೆ ಬರುತ್ತಿರುವ ಸೂಚನೆ ಕೇಳಿಬರುತ್ತಿದ್ದಂತೆಯೇ ವರ ಮತ್ತು ದಿಬ್ಬಣವನ್ನು ಬರಮಾಡಿಕೊಳ್ಳುವುದಕ್ಕೆ ಮುತ್ತೈದೆಯರು ತಯಾರಾಗಿ, ಅದಕ್ಕಾಗಿ ಮನೆಯ ಹತ್ತಿರ ಏರ್ಪಡಿಸಿದ ತೋರಣಕ್ಕೆ ಬರುತ್ತಾರೆ. ತೋರಣ ಹಾಕಿರುವ ಜಾಗಕ್ಕೆ ಎರಡೂ ಕಡೆಯವರು ಸಮೀಪಿಸುತ್ತಿದ್ದಂತೆ ಕೊಂಬು ಕಹಳೆ ಕದಿನಗಳ ಶಬ್ದ ಗಗನಕ್ಕೇರುವಂತಿರುತ್ತದೆ. ವರನ ಕಡೆಯವರು ಅವನನ್ನ ದಂಡಿಗೆಯಿಂದ ಕೆಳಗಿಳಿಸಿ ತೋರಣವಿರುವ ಜಾಗಕ್ಕೆ ಕರೆತರುತ್ತಾರೆ. ವರನ ಪಾದವನ್ನು ಬಾಲಕಿಯರು ತೊಳೆದು ಸ್ವಾಗತಿಸುತ್ತಾರೆ. ವಧುವಿನ ಕಡೆಯವರು ವರನ ಹಣೆಗೆ ಅರಸಿನ ಕುಂಕುಮ ಹಚ್ಚಿ ಆರತಿ ಬೆಳಗುತ್ತಾರೆ. ಎರಡೂ ಕಡೆಯವರು ಅಕ್ಕಿ ಕಾಳಿನ ಅಕ್ಷತೆಗಳನ್ನು ಒಬ್ಬರ ಮೇಲೊಬ್ಬರು ಚೆಲ್ಲಿ ಹರ್ಷಿತರಾಗಿ ಕೇಕೆ ಹಾಕುತ್ತಾರೆ. ಮುಂದೆ ವರನನ್ನು ಮದುವೆ ಚಪ್ಪರಕ್ಕೆ ಆಹ್ವಾನಿಸಿ ಅವನಿಗಾಗಿ ವಿಶಿಷ್ಟವಾಗಿ ಶೃಂಗರಿಸಿದ ಸ್ಥಳದಲ್ಲಿ ಆಸೀನಗೊಳಿಸಲಾಗುತ್ತದೆ. ವರನಿಗೆ ಹಾಲು, ತುಪ್ಪ ಕೊಟ್ಟರೆ ದಿಬ್ಬಣದವರಿಗೆಲ್ಲಾ ಪಾನಕ ವಿತರಣೆಯಾಗುತ್ತದೆ. ವಧುವಿನ ಕಡೆಯವರು ವರನಿಗೆ ನೀಡುವ ವಿಶೇಷ ಉಡುಗೊರೆ ಕೊಡುಗೆಗಳನ್ನು ಒಪ್ಪಿಸುತ್ತಾರೆ. ವರನ ಕಡೆಯ ಮಹಿಳೆಯರು ವಧುವಿಗಾಗಿ ತಂದ ಉಡುಗೊರೆಗಳನ್ನು ಮನೆಯೊಳಗೆ

ಹೋಗಿ "ಮಡಿಲು ತುಂಬಿ" ಬರುತ್ತಾರೆ. ಮುಂದೆ ಎಲ್ಲರೂ ಮುಹೂರ್ತದ ಘಳಿಗೆಗಾಗಿ ಕಾಯುತ್ತಾರೆ. ಮುಹೂರ್ತ ರಾತ್ರಿ ಬಹಳ ಹೊತ್ತಿನ ನಂತರ ಇರುವುದಾದರೆ ದಿಬ್ಬಣದವರು ಮತ್ತು ನೆರೆದಿದ್ದ ನೆಂಟರಿಗೆಲ್ಲಾ ಭೋಜನದ ಏರ್ಪಾಡಾಗುತ್ತದೆ. ಮುಹೂರ್ತ ಬೇಗನೆ ಮುಗಿಯುವಂತಿದ್ದರೆ, ಧಾರೆಯೆರೆದ ನಂತರ ಭೋಜನ ಸಮಾರಂಭ ನಡೆಯುತ್ತದೆ.

ಆ ಕಾಲದಲ್ಲಿ ಹಳ್ಳಿಗಳಲ್ಲಿ ಧಾರೆಯೆರೆಯುವುದು ಈಗ ನೆನಸಿಕೊಂಡರೆ ತುಂಬಾ ವಿಶೇಷದ್ದನಿಸುತ್ತದೆ. ಮೊದಲು ಗಂಡನ್ನು ಮಂಟಪಕ್ಕೆ ಕರೆದುಕೊಂಡು ಹೋಗಿ ಮಣೆಯೊಂದರ ಮೇಲೆ ನಿಲ್ಲಿಸುತ್ತಾರೆ. ಅವನೆದುರಿಗೆ ಅಂತರಪಟವನ್ನು ಹಿಡಿದ ನಂತರ ವಧುವನ್ನು ಕರೆತಂದು ಎದುರು ಮಣೆಯೊಂದರ ಮೇಲೆ ನಿಲ್ಲಿಸುತ್ತಾರೆ. ಅವನೆದುರಿಗೆ ಅಂತರ ಪಟವನ್ನು ಸರಿಸಿದ ನಂತರವೇ ಆ ಕಾಲದ ಬಹುಪಾಲು ವಧೂವರರು ಪರಸ್ಪರ ಅದೇ ಮೊದಲ ಸಾರಿ ನೋಡಿಕೊಳ್ಳುತ್ತಿದ್ದರೆಂದರೆ ಆಶ್ಚರ್ಯವಾಗಬಹುದು ! ಅವರಿಬ್ಬರು (ಅವರಿವರ) ಕೆನ್ನೆಗಳಿಗೆ ಅರಿಶಿನ ಲೇಪಿಸುತ್ತಾರೆ. ನಂತರ ಹಾರಗಳ ವಿನಿಮಯವಾಗುತ್ತದೆ. ಜೋಯಿಸರು ಯಾರಿಗೂ ಅರ್ಥವಾಗದ ಮಂತ್ರಗಳನ್ನು ಪಠಿಸುತ್ತಿರುತ್ತಾರೆ. ವಾದ್ಯಮೇಳಗಳು ಮೊಳಗುತ್ತಿರುತ್ತವೆ. ಅಂಥ ಸಂದರ್ಭದಲ್ಲೇ ವರ ವಧುವಿಗೆ ತಾಳಿ ಕಟ್ಟುತ್ತಾನೆ. ಈ ನಡುವೆ ವಧೂವರರ ಹಸ್ತಗಳನ್ನು ಒಂದರ ಮೇಲೊಂದಿರಿಸಿ ತೆಂಗಿನ ಕಾಯಿಯೊಂದನ್ನು ಇಟ್ಟು, ಅವರಿಬ್ಬರ ತಂದೆ ತಾಯಂದಿರಿಂದ ಗಿಂಡಿಯೊಂದರಿಂದ ನೀರಿನ ತೊಟ್ಟುಗಳನ್ನು ಬಿಡಿಸುತ್ತಾರೆ.

ಮುಂದೆ ಜೋಯಿಸರು ಮದುವೆಯು ಅಧಿಕಾರಯುಕ್ತವಾಗಿ ಜರುಗಿದ್ದಕ್ಕೆ ಹಲವರ ಸಾಕ್ಷ್ಯವಿದೆಯೆಂಬುದನ್ನು ಮಂತ್ರಪಟಿಸಿದಂತೆ ರಾಗವಾಗಿ ಪಠಿಸುತ್ತಾರೆ. ಅದನ್ನು ಹೆಣ್ಣಿನ ತಂದೆ ಅವರು ಹೇಳಿದಂತೆಯೇ ಹೇಳುತ್ತಿರುತ್ತಾರೆ. ಮದುವೆ ಚಪ್ಪರಕ್ಕೆ ಬಳಸಿದ ಕಂಬಗಳು, ಕೇಲು ಕುಂಬಗಳಾದಿಯಾಗಿ ಸಾಕ್ಷಿಯಾಗುತ್ತವೆ ; ಸಮಾರಂಭಕ್ಕೆ ನೆರೆದ ಸೀಮೆಯ ಹತ್ತು ಸಮಸ್ತರು ಸಾಕ್ಷಿಯಾಗುತ್ತಾರೆ. ನಂತರ ಆಜುಬಾಜಿನ ನೂರಾರು ದೇವಸ್ಥಾನಗಳ ದೇವರ ಸಾಕ್ಷಿ ಪಟನ ಸ್ವಾರಸ್ಯಕರ ರಾಗದಲ್ಲಿ ಸಾಗುತ್ತದೆ. ಉದಾಹರಣೆಗೆ ಮೇಗರವಳ್ಳಿಯ ಈಶ್ವರನು ಸಾಕ್ಷಿಯಾಗಲೀ, ಆಗುಂಬೆ ವೇಣುಗೋಪಾಲನು ಸಾಕ್ಷಿಯಾಗಲೀ..... ಮುಂತಾಗಿ ಹೇಳುತ್ತಿರುತ್ತಾರೆ. ಇಡೀ ಮದುವೆ ಸಮಾರಂಭದಲ್ಲಿ ವಧೂವರರು ಮತ್ತಿತರರಿಗೆ ಅರ್ಥವಾಗುವುದೆಂದರೆ ಈ "ಸಾಕ್ಷಿ"ಗಳೇ. ಬಹುಶಃ ಆ ಕಾಲದ ಮುಗ್ಧ ಜನರಿಗೆ ಮದುವೆಯ ವಿಧಿವಿಧಾನ ಬದ್ಧವಾಗಿ ಜರುಗಿದ್ದಕ್ಕೆ ಇದೊಂದು ಅಧಿಕಾರಯುತವಾದ ಮುದ್ರೆ ಬಿದ್ದಂತಾಗುತ್ತದೆಂದರೂ ತಪ್ಪಲ್ಲ !

ಧಾರೆಯ ಕಾರ್ಯ ಮುಗಿದ ಮೇಲೆ ವಧೂವರರನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಹಸೆಮಣೆಯಲ್ಲಿ ಕೂರಿಸಿ ಹೆಂಗಳೆಯರು ಹಲವು "ಶಾಸ್ತ್ರ"ಗಳನ್ನು

ಮಾಡಿಸುತ್ತಾರೆ. ಆ ದಿನ ಇನ್ನುಳಿದ ರಾತ್ರಿಯೆಲ್ಲಾ ಎರಡೂ ಕಡೆಯವರು ಒಬ್ಬರನ್ನೊಬ್ಬರು ಜರಿಯುತ್ತಾ ಹಾಡು ಹೇಳಿ ನಲಿಯುವುದು ತುಂಬಾ ಆಹ್ಲಾದಕರ ಸನ್ನಿವೇಶವಾಗಿರುತ್ತದೆ.

ಮರುದಿನ ಬೆಳಿಗ್ಗೆ ವಧೂವರರಿಗೆ ಮುಖ ತೊಳಿಸುವುದರಿಂದ ಹಿಡಿದು, ಗಂಗಾ ಪೂಜೆ, ಸ್ನಾನ ಮುಂತಾದವೆಲ್ಲಾ ಶಾಸ್ತ್ರೋಕ್ತವಾಗಿ ಜರುಗುತ್ತವೆ. ಅವುಗಳಲ್ಲೆಲ್ಲಾ ಹೆಂಗಸರು, ಮಕ್ಕಳ ಪಾತ್ರವೇ ಅತಿ ಮುಖ್ಯವೆಂದು ಬೇರೆ ಹೇಳಬೇಕಿಲ್ಲ.

ಬೆಳಿಗ್ಗೆ ದಿಬ್ಬಣದವರಿಗೆಲ್ಲಾ ಕಾಫಿ ತಿಂಡಿಯ ಸಮಾರಂಭ. ಸಾಮಾನ್ಯವಾಗಿ ಅವಲಕ್ಕಿ ಉಪ್ಪಿಟ್ಟು. ಬಾಳೇಹಣ್ಣು ಮತ್ತು ಕಾಫಿ ಸಮಾರಾಧನೆ. ಮಧ್ಯಾಹ್ನದ ಊಟವಾದ ನಂತರ ವಧುವನ್ನು "ಹೊರಡಿಸಿಕೊಂಡು" ಹೋಗುವುದನ್ನು ಸರಿಯಾದ ಮುಹೂರ್ತದಲ್ಲಿ ಮಾಡುತ್ತಾರೆ. ಈ ನಡುವೆ ವಧೂ ಮತ್ತು ವರರಿಗೆ ಅವರ ಸಂಬಂಧಿಕರಿಂದ "ಮೈಮುಟ್ಟು" ಅಂದರೆ ಉಡುಗೊರೆ ಕಾರ್ಯಕ್ರಮ ಜರುಗುತ್ತದೆ. ಆ ಕಾಲದಲ್ಲಿ ಸಾಮಾನ್ಯವಾಗಿ ನೀಡುತ್ತಿದ್ದ ಉಡುಗೊರೆಗಳೆಂದರೆ ಒಂದು ಅಥವಾ ಎರಡು ರೂಪಾಯಿಗಳ ನಗದು, ಹೆಚ್ಚೆಂದರೆ ಬೆಳ್ಳಿ ಲೋಟ, ಇಲ್ಲವೆ ಯಾವುದೋ ದೇವರ ಬೆಳ್ಳಿಪಟ. ಅವುಗಳನ್ನೆಲ್ಲಾ ಪಟ್ಟಿ ಮಾಡಿಟ್ಟುಕೊಂಡು ಮುಂದಿನ ಸಾರಿ ಹಾಗೆ ಮೈಮುಟ್ಟು ಇಟ್ಟವರ ಮನೆಯಲ್ಲಿ ಮದುವೆ ನಡೆದಾಗ ಅದೇ ರೀತಿ ವಾಪಸು ಮೈಮುಟ್ಟು ಮಾಡುವುದು ಆ ಕಾಲದ ಸಂಪ್ರದಾಯ. ಹೀಗೆ ಒಟ್ಟಾಗುತ್ತಿದ್ದ ನೂರಿನ್ನೂರು ಅಥವಾ ಐದುನೂರು ರೂಪಾಯಿಗಳು ಬಹುಪಾಲು ಬಡವರಾದವರ ಮದುವೆಯ ಖರ್ಚಿಗೂ ಸಹಾಯವಾಗುತ್ತಿತ್ತು.

ಮಧ್ಯಾಹ್ನದ ಭೋಜನ ಮತ್ತೆ ತಡವಾದರೆ ಇನ್ನೊಂದು ಕಾಫಿ ಸಮಾರಾಧನೆಯ ನಂತರ ದಿಬ್ಬಣ ಗಂಡಿನ ಮನೆಗೆ ವಾಪಸಾಗುತ್ತದೆ. ಅದು ಹಿಂದಿನ ದಿನ ಬಂದ ಹಾಗೆಯೇ ಜೊತೆಗೆ ಹೆಣ್ಣೊಂದನ್ನು ಕರೆದುಕೊಂಡು ಹೋಗುವ ಹೆಮ್ಮೆಯಿಂದ ಬೀಗುತ್ತಾ ಸಾಗುತ್ತದೆ. ವಧೂವರರಿಬ್ಬರೂ ದಂಡಿಗೆಯಲ್ಲಿ ಆಸೀನರಾಗಿ ಸಾಗುತ್ತಾರೆ.

ವರನ ಮನೆಯಲ್ಲಿ ಶಾಸ್ತ್ರೋಕ್ತವಾಗಿ ನೂತನ ವಧೂವರರನ್ನು ಸ್ವಾಗತಿಸುತ್ತಾರೆ. ಅಲ್ಲದೆ ಆ ರಾತ್ರಿ ಅಲ್ಲಿ ಭರ್ಜರಿ ಭೋಜನ ಏರ್ಪಾಟಾಗಿರುತ್ತದೆ. ಅದಕ್ಕೆ ಬೀಗರ ಊಟವೆಂತಲೂ ಹೇಳುತ್ತಾರೆ. ಆಗಿನ ಮದುವೆ ಮನೆಗಳಲ್ಲಿಸಾಮಾನ್ಯವಾಗಿ "ಊಟ" ವಿತ್ತೆಂದರೆ ಇದೇ. ಈ ಊಟಕ್ಕೆ ಸಾಮಾನ್ಯವಾಗಿ ಹಲವು ಬಗೆಯ ಮಾಂಸದ ಭಕ್ಷ್ಯ ಭೋಜ್ಯಗಳನ್ನು ಮಾಡುತ್ತಿದ್ದುದರಿಂದಲೇ ಅದೊಂದು 'ಊಟ'ವೆಂದು ಪರಿಗಣಿಸಲಾಗಿತ್ತು! ಹೆಣ್ಣಿನ ಮನೆಯಲ್ಲಿ ಎರಡು-ಮೂರು ಊಟ ಹಾಕಿದ್ದರೂ ಅವೆಲ್ಲಾ "ಸಿಹಿ ಊಟ". ಅವು ಬಹುಪಾಲು ಜನರ ಗಮನಕ್ಕೆ ಬರುತ್ತಿರಲಿಲ್ಲವೆಂದರೆ ಅಚ್ಚರಿಯಾಗಬಹುದು.

ನಮ್ಮೂರುಗಳಲ್ಲಿ ಜರುಗುತ್ತಿದ್ದ ಈ ಮದುವೆ ಸಮಾರಂಭಗಳಲ್ಲಿ ಇತರ ಕಡೆಗಳಿಗಿಂತ ಹೆಚ್ಚು ವ್ಯತ್ಯಾಸವಿಲ್ಲದಿರಬಹುದು. ಅವುಗಳಲ್ಲಿ ವಿಶೇಷ ಘಟನೆಗಳಿರುತ್ತಿದ್ದುದರಿಂದ ಅವುಗಳಿಗೆ ಪ್ರಾಮುಖ್ಯತೆ ಇರುತ್ತದೆ.

ನಮ್ಮ ಕಡೆಯ ಅಂದಿನ ಮದುವೆಗಳಲ್ಲಿ ವರದಕ್ಷಿಣೆಯ ಪಿಡುಗು ಇರುತ್ತಿರಲಿಲ್ಲವೆಂದರೆ ಅಚ್ಚರಿಯಾಗಬಹುದು. ಬದಲಿಗೆ "ವಧು ದಕ್ಷಿಣೆ" ಕೊಡಬೇಕಾಗಿರುತ್ತಿತ್ತು ! ಆ ಕಾಲದಲ್ಲಿ ಮಲೇರಿಯಾ ವ್ಯಾಧಿಯ ಹಾವಳಿ, ಗರ್ಭಾವಸ್ಥೆ ಮತ್ತು ಹೆರಿಗೆ ಸಮಯಗಳಲ್ಲಿ ಬಹುಪಾಲು ಹೆಂಗಸರು ಅಕಾಲ ಮರಣಕ್ಕೀಡಾಗುತ್ತಿದ್ದರು. ಒಂದು ರೀತಿಯಲ್ಲಿ ಹೆಣ್ಣುಗಳ ಅಭಾವವಿರುತ್ತಿತ್ತು. ವಯಸ್ಕ ಗಂಡಸರಿಗೆ ಮೂರು-ನಾಲ್ಕು ಸಾರಿ ಮದುವೆಯಾಗುತ್ತಿದ್ದುದು ಅಪರೂಪವಾಗೇನೂ ಇರಲಿಲ್ಲ. ಜೊತೆಗೆ ತಮ್ಮ ಮಗಳಿಗೆ ಮುಂದೇನಾದರೂ ಖರ್ಚಿನ ಅವಶ್ಯಕತೆ ಇದ್ದರೆ, ಅವಳಿಗೆ ಸಹಾಯವಾಗಲೆಂಬುದು ಒಂದು ಕಾರಣವೆನಿಸುತ್ತದೆ. "ತೆರ" ಎಂದು ಕರೆಯಲಾಗುತ್ತಿದ್ದ ವಧುದಕ್ಷಿಣೆಯ ಮೊಬಲಗು ಆ ಕಾಲದಲ್ಲಿ 50-100 ರೂಪಾಯಿ ಇಲ್ಲವೆ ಕೆಲಸಾರಿ ರೂ.200/-ವರೆಗೂ ಏರಿಬಿಡುತ್ತಿತ್ತು. ಮದುವೆಗೆ ಮೊದಲೇ ಈ ಮೊಬಲಗು ನಿರ್ಧಾರವಾಗುತ್ತಿತ್ತು. ಪ್ರಸ್ತುತ ಸಮಯದಲ್ಲಿ ಅಷ್ಟೇನೂ ಹೆಚ್ಚಿನದಾಗಿ ಕಾಣಿಸದಿರಬಹುದು. ಆ ಕಾಲದಲ್ಲಿ ಅದೇ ದೊಡ್ಡ ಮೊತ್ತ.

ತೆರ ಕೊಡುವ ವಿಷಯದಲ್ಲಿ ನಮ್ಮ ಕುಟುಂಬದಲ್ಲೇ ಜರುಗಿದ ಸಂಗತಿಯೊಂದು ಉಲ್ಲೇಖಾರ್ಹ. ನಮ್ಮದು ಸಮಷ್ಠಿ ಕುಟುಂಬವಾದುದರಿಂದ ಮದುವೆಯಂತಹ ಸಂದರ್ಭಗಳಲ್ಲಿ ಹಿಂದೆ ಜರುಗಿದ ಮದುವೆಗಳಲ್ಲಿ ಖರ್ಚು ಮಾಡಿದ ರೀತಿಯಲ್ಲೇ ಅವುಗಳನ್ನು ಹೆಚ್ಚುಕಡಿಮೆ ನಡೆಸುತ್ತಿದ್ದರು. ವಧುವಿಗೆ ಕಟ್ಟುವ ತಾಳಿಗೆ ಉಪಯೋಗಿಸುವ ಚಿನ್ನ, ಸೀರೆ ಬಟ್ಟೆಗಳೆಲ್ಲಾ ಸಾಮಾನ್ಯ ಒಂದೇ ಮಟ್ಟದಲ್ಲಿರುವುದು ಅನಿವಾರ್ಯ. ಆದರೆ ಒಂದು ಮದುವೆ ಸಂದರ್ಭ ಧಾರೆ ಶಾಸ್ತ್ರಗಳೆಲ್ಲಾ ಮುಗಿದು ಇನ್ನೇನು ದಿಬ್ಬಣ ಹೊರಡಿಸುವ ಏರ್ಪಾಡಿನಲ್ಲಿರುವಾಗ ಹೆಣ್ಣಿನ ಮನೆಯವರು ತೆರದ ವಿಷಯದಲ್ಲಿ ತಕರಾರು ಎತ್ತಿದರು. ಮೊದಲು ಮಾತಾಡಿದ್ದಕ್ಕಿಂತ ಸ್ವಲ್ಪ ಜಾಸ್ತಿ ಮೊಬಲಗನ್ನು ಕೊಡಬೇಕೆಂದು ಹಟ ಹಿಡಿದರು. ಬಹಳ ಸಮಯ ತರ್ಕವಿತರ್ಕಗಳಾದವು. ಎರಡೂ ಕಡೆಯವರು ತಮ್ಮ ತಮ್ಮ ನಿಲುವುಗಳಿಂದ ಹಿಂಜರಿಯಲಿಲ್ಲ. ಹೆಣ್ಣಿನ ಕಡೆಯವರು ಅದು ಇತ್ಯರ್ಥವಾಗುವವರೆಗೂ ಹೆಣ್ಣನ್ನು ಕಳುಹಿಸುವುದಿಲ್ಲವೆಂದು ಪಟ್ಟುಹಿಡಿದರು. ನಮ್ಮವರೂ ಸಹಾ ತಮ್ಮ ನಿಲುವಿನಿಂದ ಜಗ್ಗಲಿಲ್ಲ. ಅಂತೂ ಹೆಣ್ಣುಗಂಡುಗಳಿಲ್ಲದೆ ನಮ್ಮವರು ಊರಿಗೆ ಹಿಂದಿರುಗಿದರು. ಮರುದಿನ ಅವರೇ ಗಾಡಿಯಲ್ಲಿ ಹೆಣ್ಣುಗಂಡುಗಳನ್ನು ನಮ್ಮಲ್ಲಿಗೆ ಕಳುಹಿಸಿಕೊಟ್ಟರು ! ಮದುವೆ ಸಂದರ್ಭದಲ್ಲಿ ಎಷ್ಟೊಂದು ಕಟ್ಟುಪಾಡುಗಳಿಗೆ ಕೆಲವರು ಅಂಟಿಕೊಳ್ಳುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನ.

ಮಲೆನಾಡಿನ ಬಹುಪಾಲು ಮದುವೆಗಳು ಸಾಮಾನ್ಯವಾಗಿ ನಿರ್ಧಾರವಾಗುತ್ತಿದ್ದುದು ಮೇ ತಿಂಗಳ ಅಂತ್ಯ ಇಲ್ಲವೇ ಜೂನ್ ತಿಂಗಳುಗಳಲ್ಲಿ. ಆ ಸಮಯಕ್ಕಾಗಲೇ ಮಳೆಗಾಲ

ಆರಂಭವಾಗಿದ್ದೂ ಜನಜೀವನವೆಲ್ಲಾ ಅಸ್ತವ್ಯಸ್ತವಾಗಿರುತ್ತಿದ್ದವು. ಜೊತೆಗೆ ಬಹುಪಾಲು ಸಣ್ಣಪುಟ್ಟ ಮನೆಗಳು ಮತ್ತು ಹೆಚ್ಚು ನೆರೆಹೊರೆಗಳೂ ಇರುತ್ತಿರಲಿಲ್ಲ. ನಮಗಂತೂ ಕೆಲವು ಮದುವೆಗಳ ಸಮಯದಲ್ಲಿ ಹೊಳೆ ತುಂಬಿ ಹರಿಯುತ್ತಿತ್ತು. ಬೆಳಿಗ್ಗೆ ದಿಬ್ಬಣ ಹೋಗುವಾಗ ಹೊಳೆ ದಾಟಲು ಸಾಧ್ಯವಾಗುವಂತಿದ್ದರೆ, ಮರುದಿನ ಹಿಂದಿರುಗು ವಷ್ಟರಲ್ಲೆ ಹೊಳೆ ತುಂಬಿ ಹರಿಯುತ್ತಿದ್ದ ನಿದರ್ಶನಗಳೆಷ್ಟೋ. ಅಂತಹ ಸಂದರ್ಭಗಳಲ್ಲಿ ವಧೂವರರನ್ನು ಹೊಳೆದಾಟಿ ಸುವುದೇ ಪ್ರಯಾಸದ ಕೆಲಸವಾಗುತ್ತಿತ್ತು. ಇನ್ನು ರಾತ್ರಿ ಮುಹೂರ್ತದ ಸಮಯದಲ್ಲಿ ಮಳೆ ಸುರಿಯುತ್ತಿದ್ದರಂತೂ ಛತ್ರಿಗಳನ್ನು ಹಿಡಿದುಕೊಂಡು ಧಾರೆಯೆರೆಯಬೇಕಾಗುತ್ತಿತ್ತು !

ಈ ನಿದರ್ಶನಗಳನ್ನು ಬರೆಯಲು ಕಾರಣಗಳೂ ಇವೆ. ಮದುವೆ ಮುಹೂರ್ತಗಳಿಗೆ ಪುರೋಹಿತರು ನಿಗದಿಪಡಿಸಿದ ಘಳಿಗೆ ಅನಾದಿ ಕಾಲದಿಂದಲೂ ಅಂಟಿಕೊಂಡು ಬರುತ್ತಿದ್ದ ಅಂದಿನ ಮೂಢನಂಬಿಕೆ ಬಗೆಗೆ ಕನಿಕರ ಹುಟ್ಟಿಸುತ್ತಿದೆ. ಮೊದಲೇ ಪ್ರಸ್ತಾಪಿಸಿದಂತೆ ರಾತ್ರಿಯ ಮುಹೂರ್ತಗಳು ಮಾಯವಾಗಿ ಪ್ರಸ್ತುತ ಹಾಡುಹಗಲಿನಲ್ಲೇ ಮದುವೆಗಳು ಜರುಗುತ್ತಿರುವುದಕ್ಕೆ ಏನೆನ್ನಬೇಕೋ ನಾ ಹೇಳಲಾರೆ. ಅದೇ ರೀತಿ ಮದುವೆ ಶ್ರಾಯದಲ್ಲಿ ಯಾವುದೋ ಒಂದು ಅಧಿಕ ಮಾಸವೆಂಬ ಕಾರಣ ಇಡೀ ತಿಂಗಳು ಮದುವೆ ಮುಹೂರ್ತ ಇಟ್ಟುಕೊಳ್ಳದೇ ಪುರೋಹಿತರ ಆಜ್ಞಾನುವರ್ತಿಗಳಾಗಿ ಮಳೆಗಾಲ ಆರಂಭವಾದ ನಂತರ ಮದುವೆಗಳೇಳುವುದು ಈಗಲೂ ಮುಂದುವರಿಯುತ್ತಿದೆ. ಹಾಗೆಯೇ ಆಷಾಢ ಮಾಸದಲ್ಲಿ ಮದುವೆಗಳು ಸಲ್ಲವೆಂದು ಕರ್ನಾಟಕದವರಿಗೆ ಹೇಳಿದರೆ, ತಮಿಳುನಾಡಿನಲ್ಲಿ ಆಷಾಢ ಮಾಸದಲ್ಲೇ ಮದುವೆಗಳು ಜರುಗುತ್ತವಲ್ಲ? ಈ ವೈರುಧ್ಯ ಅದೆಂದು ಸರಿಪಡುತ್ತದೆಯೋ?

ಮದುವೆಗಳ ಬಗೆಗೆ ಬರೆಯುವ ಮೊದಲ ಭಾಗದಲ್ಲೆ ಅವುಗಳಲ್ಲಿ ನನ್ನ ಪಾತ್ರ ವಿರುವ ಬಗೆಗೆ ಪ್ರಸ್ತಾಪಿಸಿದ್ದೆನಷ್ಟೆ. ಒಂದು ಕಾಲದಲ್ಲಿ ನಮ್ಮ ಸಂಬಂಧಿಕರ ವಲಯದಲ್ಲಿ ಓದುಬರಹ ತಿಳಿದವನೆಂಬ ಪ್ರತೀತಿ ಇತ್ತಷ್ಟೆ. ಅದರಿಂದ ನಮ್ಮ ಸಂಬಂಧಿಕರ ಯಾವುದೇ ಮದುವೆ ಸಮಾರಂಭಗಳಿಗೆ ನಾನು ಹಾಜರಾದಾಗ ಮದುವೆಯ ಹಿಂದಿನ ದಿನದಿಂದ ಹಣ ಕಾಸಿನ ವ್ಯವಹಾರಗಳ ಲೆಕ್ಕ ಬರೆಯುವ ಜವಾಬ್ದಾರಿ ನನ್ನದಾಗಿಬಿಡುತ್ತಿತ್ತು. ವರನ ಕಡೆಯವರು ದಿಬ್ಬಣಕ್ಕೆ ಹೊರಡುವಾಗಿನಿಂದ ಆರಂಭವಾಗುವ ಮೈಮುಟ್ಟು ಬರೆಯುವುದು, ವಧುವಿನ ಮನೆಗೆ ತೆಗೆದುಕೊಂಡು ಹೋಗುವ ನಗನಾಣ್ಯ ಮತ್ತು ಹಣಕಾಸಿನ ವ್ಯವಹಾರವೆಲ್ಲಾ ನನ್ನದಾಗುವುದು ಒಂದು ರೀತಿಯಲ್ಲಿ ಅನಿವಾರ್ಯವಾಗಿಬಿಡುತ್ತಿತ್ತು. ಹೆಣ್ಣಿನ ಮನೆಯಲ್ಲಿ ವಿವಾಹ ಕಾರ್ಯ ಮುಗಿದು ಗಂಡಿನ ಮನೆಗೆ ಹಿಂದಿರುಗಿದ ಮರುದಿನ ನನ್ನ ಜವಾಬ್ದಾರಿ ಯನ್ನು ವಹಿಸಿಕೊಟ್ಟು ಹಿಂದಿರುಗುತ್ತಿದ್ದೆ. ಆ ಸಮಯದಲ್ಲಿ ಅದೊಂದು ಹೆಮ್ಮೆಯ ಜವಾಬ್ದಾರಿಯೆನಿಸುತ್ತಿತ್ತು ನನಗೆ.

# ಪರಿಸಮಾಪ್ತಿ

*ಪ್ರಿಯ ಓದುಗ ಮಹಾಶಯ,*

ಮುಳುಗಿಹೋದ ನಮ್ಮೂರಿನ ನೆನಪುಗಳನ್ನು ಹೇಳುವ ನೆಪದಲ್ಲಿ ಬಹಳಷ್ಟು ವೃಥಾ ಪ್ರಲಾಪದಲ್ಲಿ ನಿಮ್ಮ ಸಮಯ ಹಾಳು ಮಾಡಿದೆನಿನಿಸಿತೇ? ಹಾಗಿದ್ದರೆ ಕ್ಷಮಿಸಿಬಿಡಿ. ಆದರೆ ಈ ಕಥನವನ್ನು ಬರೆಯಲು ಪ್ರೇರೇಪಣೆಗಳನ್ನು ನಾಲ್ಕು ಮಾತುಗಳಲ್ಲಿ ಹೇಳಿ ಮುಗಿಸಿಬಿಡುತ್ತೇನೆ.

ನಮ್ಮೂರಲ್ಲಿ ಹುಟ್ಟಿದಾರಭ್ಯ ನಾನು ಅಲ್ಲಿ ನೆಲೆಯಾಗಿ ನಿಂತಿದ್ದು ಬಾಲ್ಯದ ಕೇವಲ 5-6 ವರ್ಷಗಳಿರಬಹುದು. ಅಲ್ಲಿಂದ ಈ ತನಕ ವಿದ್ಯಾಭ್ಯಾಸ, ಜೀವನೋಪಾಯದ ಕೆಲಸಕಾರ್ಯಗಳಲ್ಲಿ ಊರೂರು ಅಲೆಯುತ್ತಿದ್ದ ಅಲೆಮಾರಿ ಜೀವನ ನನ್ನದಾಯಿತು. ಹಲವಾರು ಪೇಟೆ, ಪಟ್ಟಣ, ಕಣ್ಮನ ತಣಿಸುವ ತಾಣಗಳಲ್ಲಿ ಓಡಾಡಿದ್ದರೂ ನನ್ನೂರಿಗೆ ಸಮನಾದುದು ನನಗೆ ದೊರೆಯಲಿಲ್ಲವೆಂದರೆ ಅಚ್ಚರಿಯಾಗಬಹುದು. ಅಲ್ಲಿಯ ಪ್ರಕೃತಿ ಸೌಂದರ್ಯ, ಜನಜೀವನ, ಮತ್ತು ಘಟನೆಗಳು ನನ್ನಲ್ಲಿ ಈಗಲೂ ಹಸಿರಾಗಿ ನೆಲಸಿವೆ. ಅಯ್ಯೋ ಮತ್ತೊಮ್ಮೆ ಅಲ್ಲಿಗೆ ಹೋಗಿ ಅವುಗಳ ಸವಿಯನ್ನು ಮೆಲ್ಲೋಣವೆಂದರೆ ಅದೆಲ್ಲಿ? ಜಲಪ್ರಳಯದಲ್ಲಿ ಮುಳುಗಿಹೋಗಿದೆ.

ವಾರಾಹಿ ಜಲವಿದ್ಯುತ್ ಯೋಜನೆ ಕಾರ್ಯಗತವಾಗುತ್ತಿದ್ದ ಕಾಲದಲ್ಲಿ ನನ್ನ ತಾಯಿಯ ತವರುಮನೆ ಮಾನಿಗೆ ಒಂದು ಸಾರಿ ಹೋಗುವ ಅವಕಾಶ ಒದಗಿಬಂದಿತ್ತು. ಅಲ್ಲಿದ್ದವರಾರನ್ನೂ ಇನ್ನೂ ಗುಳೇ ಹೊರಡಿಸಿರಲಿಲ್ಲ. ನನ್ನ ಸೋದರ ಮಾವ ಒಬ್ಬರಿಗೆ ಹುಷಾರಿರಲಿಲ್ಲ. ಅವರನ್ನು ನೋಡಲು ಹೋಗಬೇಕಾಯಿತು. ಯಡೂರಿನಿಂದ ಯಾರದೋ ಜೀಪ್‌ನಲ್ಲಿ ಪ್ರಯಾಣ ಬೆಳೆಸಿದೆ. ದಾರಿಯಲ್ಲಿ ಹಿಂದೊಂದು ಸಾರಿ ಅಕ್ಷರಾಭ್ಯಾಸಕ್ಕಾಗಿ ನಾನು ಹೋಗುತ್ತಿದ್ದ ಪ್ರೈಮರಿ ಶಾಲೆಯ ಕಟ್ಟಡ ನನ್ನ ನೆನಪನ್ನು ಹಿಂದೋಡಿಸಿತು. ಮುಂದೆ ಮುಂದೆ ಸರಿಯುತ್ತಾ ದಟ್ಟವಾದ ಮಲೆಯ ಕಾಡು ಎದುರು ಬರುತ್ತದೆಂದು ಹಂಬಲಿಸುತ್ತಿದ್ದೆ. ಅಯ್ಯೋ, ಅವೆಲ್ಲಾ ಎಲ್ಲಿ ಹೋದವು. ಯಡೂರಿನಿಂದ ಮಾನಿಯ ವರೆಗೂ ಇದ್ದ ವೃಕ್ಷ ಸಂಪತ್ತೆಲ್ಲಾ ನಾಶವಾಗಿ ಆ ವಲಯ ಬಟಾ ಬಯಲಾಗಿತ್ತು.

ನಾವು ಎಳೆಯರಾಗಿದ್ದ ಪಯಣಿಸುತ್ತಿದ್ದ ಘಾಟಿ ದಾರಿಗಳ ಬದಲಿಗೆ ಮಾನಿಯವರೆಗೂ ಟಾರ್ ರಸ್ತೆಯಾಗಿತ್ತು. ಪ್ರತಿ ವರ್ಷ ಅಲ್ಲಿದ್ದ ಒಂದು ಗೇರು ಮರದಿಂದ ಗೇರು ಬೀಜಗಳನ್ನು ನನ್ನ ಅಜ್ಜಿ ಸಂಗ್ರಹಿಸುತ್ತಿದ್ದ ಮರ ಇರಬಹುದೇ ಎಂದು ಕಾತರ ದಿಂದ ಕಣ್ಣು ಹಾಯಿಸಿದೆ. ನೂರಾರು ವರ್ಷಗಳಿಂದ ಗಗನಚುಂಬಿಯಾಗಿ ನೆಲಸಿದ್ದ ಮರಗಳೇ ನಿರ್ನಾಮವಾದ ಮೇಲೆ ಬಡಕಲು ಗೇರುಮರವೆಲ್ಲಿ? ಸದಾ ಬೆಟ್ಟಗುಡ್ಡ ಗಳಿಂದ ಸುತ್ತುವರಿದು, ಮರಗಳ ಸಾಲುಗಳಿಂದ ಆವರಿಸಿಕೊಂಡು ತಂಪಾಗಿ ಮಸಕು ಮಸಕಾಗಿರುತ್ತಿದ್ದ ಆಕಾಶ ಈಗ ಪಳಪಳನೆ ಹೊಳೆಯುತ್ತಿದೆ; ಬಿಸಿಲಿನ ಬೇಗೆ ಸುಡುತ್ತಿದೆ. ಹೊಳೆ ನೀರನ್ನು ಇನ್ನೂ ಅಡ್ಡ ಹಾಕಿರದಿದುದ್ದರಿಂದ ಅದರ ಬೋರ್ಗರೆತ ವೊಂದು ಮಾತ್ರ ಕೇಳಿಸುತ್ತಿತ್ತು ಹಿಂದಿನಂತೆ. ಹಿಂದೆ ನಾನು ತಿರುಗಾಡಿದ್ದ ತಾಣಗಳ ಲ್ಲೆಲ್ಲಾ ಬಯಲಾಗಿ ಗುರುತು ಹಿಡಿಯುವಂತಿಲ್ಲ. ಸೋದರಮಾವ ಮತ್ತು ಕುಟುಂಬ ದವರಿಗೆ ಸಾಂತ್ವನ ಹೇಳಿ ಭಾರವಾದ ಹೃದಯದಿಂದ ಹಿಂದಿರುಗಿದೆ. ವಾಪಸು ಬರುವಾಗ ಹಿಂದಿನ ದೃಶ್ಯಗಳೆಲ್ಲಾ ನೆನಪಾಗಿ ನನಗರಿವಿಲ್ಲದೇ ಅಶ್ರುತರ್ಪಣ ವಾಯಿತು.

ಮತ್ತು ಕೆಲವೇ ದಿನಗಳಲ್ಲಿ ಚಿಕ್ಕಪ್ಪ ಮಂಜಪ್ಪ ಗೌಡರಿಗೆ ಹುಷಾರಿರದಿದ್ದುದರಿಂದ ನಮ್ಮೂರು ಹೊಳೆಗದ್ದೆಗೂ ಹೋಗುವ ಅವಕಾಶ ಒದಗಿಬಂದಿತು. ಸಾಮಾನ್ಯವಾಗಿ ಬಸ್ಸಲ್ಲಿ ಪ್ರಯಾಣ ಮಾಡಿ ನಮ್ಮೂರಿಗೆ ಸುಮಾರು ಒಂದೂವರೆ ಮೈಲಿ ದೂರದ ಬಸ್ ಸ್ಟಾಂಡ್‌ನಲ್ಲಿ ಇಳಿದು ನಡೆದುಕೊಂಡು ಹೋಗುವುದು ವಾಡಿಕೆ. ಅಲ್ಲಿಂದ ನಮ್ಮ ಮನೆಯವರೆಗೂ ದಟ್ಟಕಾಡು ಮತ್ತು ಗದ್ದೆಕೋಗಿನ ಕಾಲುದಾರಿ ಹಿಡಿದು ನಡೆದು ಹೋಗುವುದು ಬಾಲ್ಯದಿಂದಲೂ ಅಭ್ಯಾಸವಾಗಿತ್ತು. ಆದರೆ ಈ ಸಾರಿ ನಾನು ಕುಳಿತ ಬಸ್ಸಿನವರು ಅಲ್ಲಿ ನಿಲ್ಲಿಸುವುದಕ್ಕಾಗುವುದಿಲ್ಲವೆಂದು ಮುಂದೆ ಯಡೂರಿನ ರೈಸ್‌ಮಿಲ್ ಹತ್ತಿರ ನಿಲ್ಲಿಸಿದರು. ಅಲ್ಲಿಂದ ನಮ್ಮೂರಿಗೆ ಎರಡೂವರೆ-ಮೂರು ಮೈಲಿ ಫಾಸಲೆ ಸುತ್ತಿ ಬಳಸಿ ಹೋಗುವ ಗಾಡಿದಾರಿ, ನಡುನಡುವೆ ಕಾಡಿನ ನಡುವೆ ಕಾಲುದಾರಿಗಳಲ್ಲಿ ನಡೆದುಕೊಂಡು ಹಿಂದೆ ಬಹಳಷ್ಟು ಸಾರಿ ಹೋಗಿದ್ದ ಅಭ್ಯಾಸವೂ ಇತ್ತು. ಬಸ್ಸಿನಿಂದ ಇಳಿದವನೇ ಗಾಡಿ ದಾರಿಯಲ್ಲಿ ಪಯಣಿಸತೊಡಗಿದೆ. ಸ್ವಲ್ಪ ದೂರ ತೆರಳುವುದರಲ್ಲೇ ಆಘಾತ ಕಾದಿತ್ತು. ರಸ್ತೆಯೇನೋ ಮುಂದುವರಿದಿತ್ತು. ಆದರೆ ಅದನ್ನು ಆವರಿಸಿಕೊಂಡಿದ್ದ ದಟ್ಟವಾದ ಕಾಡು ಬಯಲಾಗಿತ್ತು. ಜೊತೆಗೆ ಈಗ ಹಲವಾರು ರಸ್ತೆಗಳು ವಿವಿಧ ದಿಕ್ಕುಗಳತ್ತ ಸಾಗುವಂತಿದ್ದವು. ಸ್ವಲ್ಪ ದೂರ ಪಯಣಿಸುತ್ತಿದ್ದಂತೆಯೇ ದಾರಿ ತಪ್ಪಿತು. ಯಾವ ದಾರಿಯಲ್ಲಿ ಮುಂದುವರಿಯಬೇಕೆಂಬುದೇ ತಿಳಿಯಲಿಲ್ಲ. ಒಂದೊಂದರಲ್ಲಿ ಸ್ವಲ್ಪ ದೂರ ನಡೆದು ಮತ್ತೆ ಬೇರೊಂದರಲ್ಲಿ ಪ್ರಯತ್ನಿಸುತ್ತಿದ್ದೆ. ಬೆಳಗಿನ ಸಮಯವಾದುದರಿಂದ ತಿರುಗಾಡುವ ಜನರ ಸುಳಿವೂ ಇರಲಿಲ್ಲ. ದೂರದ ಕೆಲವು ತಾಣಗಳಲ್ಲಿ ದಟ್ಟವಾದ ಹೊಗೆ ಏಳುತ್ತಿರುವುದು ಗೋಚರವಾಗುತ್ತಿತ್ತು. ಕಡಿದುಹಾಕಿದ ಕೆಲವು ಮರಗಳನ್ನು ಸುಟ್ಟು

ಇದ್ದಿಲು ತಯಾರು ಮಾಡುತ್ತಿದ್ದ ಸ್ಥಳಗಳೆಂದು ನಂತರ ತಿಳಿಯಿತು. ಮತ್ತೆ ಕೆಲವು ಕಡೆಗಳಲ್ಲಿದ್ದ ಟ್ರಾನ್ಸಿಸ್ಟರ್ ರೇಡಿಯೋಗಳಿಂದ ಹಾಡುಗಳೂ ಕೇಳಿಬರುತ್ತಿದ್ದವು. ನನಗೆ ಹತ್ತಿರದಲ್ಲಿ ಕೆಲವು ಒಂದೇ ಮನೆಯ ಹಳ್ಳಿಗಳ ಜ್ಞಾಪಕವಿದ್ದರೂ ಅವು ಈಗ ಯಾವ ದಿಕ್ಕಿನಲ್ಲಿವೆ. ಎಂಬುದನ್ನು ಅಂದಾಜು ಮಾಡಲು ಸಹಾ ಆಗಲಿಲ್ಲ. ಸುಮಾರು ಒಂದೂವರೆ ಗಂಟೆಯ ಸಮಯ ಮನಸ್ಸಿಗೆ ಬಂದ ದಾರಿಗಳಲ್ಲೆಲ್ಲಾ ಸಂಚರಿಸಿ ನೋಡಿದೆ. ಕಾಲುಗಳಲ್ಲಿ ಸೆಡೆತ (Cramps) ಶುರುವಾಗಿ ಅಲ್ಲಲ್ಲೇ ಕುಳಿತುಕೊಂಡು ವಿಶ್ರಮಿಸಬೇಕಾಯಿತು. ಮತ್ತೆ ನಡೆದರೆ ಮತ್ತೆ ಕಾಲುಗಳು ಸೋಲುತ್ತಿದ್ದವು. ಅಂತಿಮವಾಗಿ ಒಂದು ಜಾಗದಲ್ಲಿ ಕೆಲಕಾಲ ವಿಶ್ರಮಿಸಿ ಕಾಯ್ದು ನೋಡುವುದು ಎಂದು ನಿರ್ಧರಿಸಿದೆ. ಸ್ವಲ್ಪ ಸಮಯದಲ್ಲೇ ಹೊಗೆ ಬರುತ್ತಿದ್ದ ಒಂದು ಕಡೆಯಿದ್ದ ಮಾನವಾಕೃತಿಯೊಂದು ಬರುತ್ತಿದ್ದುದು ಗೋಚರವಾಯಿತು. ಹತ್ತಿರ ಬಂದ ಮೇಲೆ ಮಾತಾಡಲು ಪ್ರಯತ್ನಿಸಿದೆ. ಅವನು ತಮಿಳಿನವನಾದುದರಿಂದ ನನ್ನ ಮಾತುಗಳು ಅರ್ಥವಾಗಲಿಲ್ಲ. ಅದನ್ನರಿತ ನಾನೇ ನನಗೆ ತಿಳಿದ ತಮಿಳಿನಲ್ಲಿ ನನ್ನ ಪಾಡನ್ನು ವಿವರಿಸಿದೆ. ನಾನು ತಲುಪಬೇಕಾದ ಜಾಗವನ್ನು ಹೇಳಿದೆ. ಅವನಿಗದರ ಪರಿಚಯವಿರಲಿಲ್ಲ. ಅವನೇ ಹೇಳಿದ ಅಲ್ಲೊಬ್ಬರು ಬಸ್ಸು ನಡೆಸುತ್ತಿರುವ ಸಾಹುಕಾರರ ಮನೆಯಿದೆ; ಅಲ್ಲಿಗೆ ಕರೆದುಕೊಂಡು ಹೋಗುವುದಾಗಿ ತಿಳಿಸಿದ. ಆಗ ನನಗೆ ಗೊತ್ತಿರುವಂತೆ ಕುಂದೂಡಿ ಎಂಬ ಊರಿನ ನನ್ನ ಸಂಬಂಧಿಕರು ಆಗ ಬಸ್ಸು ನಡೆಸುತ್ತಿದ್ದರು. ಸಂತಸದಿಂದ ಒಪ್ಪಿಕೊಂಡೆ. ಆದರೆ ಅವನು ಕರೆದುಕೊಂಡ ದಾರಿಯೇ ಬೇರೆ. ಹಿರಿಗೆ ಎಂಬ ಊರಿನ ಹತ್ತಿರ ಬಂದಾಗ ಅಲ್ಲಿದ್ದ ಅಡಿಕೆ ತೋಟವನ್ನು ನೋಡಿದಾಗ ಹಿಂದಿನ ನೆನಪು ಸ್ಮೃತಿ ಪಟಲಕ್ಕೆ ಬಂದಿತು. ಅನಂತರ ತಿಳಿಯಿತು ಅವರೂ ಸಹಾ ಈಗ ಬಸ್ಸು ನಡೆಸುತ್ತಾರೆಂಬುದು! ಮುಳುಗಡೆಯ ಸಲುವಾಗಿ ಪರಿಹಾರದ ಹಣ ಪಡೆದುಕೊಂಡ ನಮ್ಮಲ್ಲಿ ಕೆಲವರು ತಕ್ಷಣ ಬೇರೆ ಕಡೆ ಜಮೀನು ಖರೀದಿಸಲಾಗದೆ ಬಸ್‌ಗಳನ್ನು ನೆಡಸಲಾರಂಭಿಸಿದ್ದರು ! ಅಲ್ಲಿಂದ ಸ್ವಲ್ಪ ಮುಂದೆ ಹೋದರೆ ನಮ್ಮ ಮನೆ ಹತ್ತಿರವಿರುವ ಬೆಲಗಣೆ ; ಅಲ್ಲೇ ಮುಂದುವರಿದರೆ ನಮ್ಮ ಹೊಳೆಯ ಸೇತುವೆ ಸಿಗುತ್ತದೆಂಬ ಅರಿವಾಯಿತು. ತಮಿಳನು ಬೆಲಗಣೆ ದಾಟುವವರೆಗೂ ನನ್ನ ಜೊತೆ ಇದ್ದ. ನಂತರ ನಾನೊಬ್ಬನೆ ಸೇತುವ ದಾಟಿ ಮನೆ ತಲುಪಿದೆ. ಹೊಳೆಯ ವಲಯದಲ್ಲಿದ್ದ ನನ್ನ ಬಾಲ್ಯದ ನೆನಪುಗಳೆಲ್ಲಾ ಅಳಸಿಹೋಗಿದ್ದವು. ನಮ್ಮ ದೇವರ ಬನವೂ ಸಂಪೂರ್ಣವಾಗಿ ನಾಶವಾಗಿತ್ತು.

ಮನೆ ತಲುಪಿದ ನಂತರ ನಾನು ಪಟ್ಟ ಪಾಡುಗಳನ್ನು ವಿವರಿಸಿದೆ. ಕೆಲವರು ಕನಿಕರಪಟ್ಟು ಉಪಚರಿಸಿದರೆ, ಮತ್ತೆ ಕೆಲವರು ಮುಸಿ ಮುಸಿ ನಗುತ್ತಿದ್ದರು. ಮನೆಯ ಸುತ್ತಲ ಕಾಡುಗಳೂ ಸಹಾ ಮುಳುಗಡೆಯವರ (ಅರಣ್ಯ ಇಲಾಖೆ) ಪಾಲಾಗಿದ್ದವು. ಮನೆ ಸುತ್ತ ಎಲ್ಲಿ ನೋಡಿದರೂ ಬೋಳುಗುಡ್ಡ ನಮ್ಮನ್ನು ಅಣಕಿಸುವಂತೆ ಎದ್ದು ನಿಂತಿದ್ದವು. ಆ ಪರಿಸರದಲ್ಲಿ ಕಳೆದಿದ್ದ ನನ್ನ ಬಾಲ್ಯದ ನೆನಪುಗಳು ಒಂದಾದ ಮೇಲೊಂದರಂತೆ ಮರುಕಳಿಸುತ್ತಿದ್ದವು. ದುಃಖ ಉಮ್ಮಳಿಸಿ ಬರುವಂತಿತ್ತು. ಆದರೆ ಯಾರಿಗೆ ಹೇಳುವುದು

ನಮ್ಮೂರಿಗಾದ ಈ ಪಾಡನ್ನು. ಪೇಟೆಯಲ್ಲಿ ನೆಲೆಸಿದ್ದ ನಮ್ಮಲ್ಲನೇಕರಿಗೆ ನಮ್ಮ ಜಮೀನು ಮನೆ ಮುಳುಗಡೆಯಾದರೆ ಪರಿಹಾರದ ಹಣ ಬಂದು ನಾವು ಸುಖವಾಗಿರಬಹುದೆಂಬ ಆಸೆ ಹುದುಗಿಕೊಂಡಿರುತ್ತಿತ್ತೆಂಬುದನ್ನು ನಾನಿನ್ನು ಮುಚ್ಚಿಟ್ಟುಕೊಳ್ಳಲಾರೆ. ಮುಳುಗಡೆಯಾದ ಇತರ ಪ್ರದೇಶದ ಜನಗಳ ಬವಣೆಯನ್ನು ಪತ್ರಿಕೆಗಳಲ್ಲಿ ಆಗಾಗ್ಗೆ ಓದುತ್ತಿದ್ದರೂ ಅದು ಅಷ್ಟಾಗಿ ಮನದಾಳಕ್ಕಿಳಿದಿರಲಿಲ್ಲವೆನ್ನಬೇಕು. ಈಗ ನನ್ನ ಮನೆ, ನನ್ನೂರು, ಎಲ್ಲಕ್ಕಿಂತ ನಮ್ಮ ಸುತ್ತಲ ಪರಿಸರವೆಲ್ಲಾ ನಾಶವಾಗಿ ಮುಳುಗಡೆಯಾಗುತ್ತಿವೆ ಎಂಬ ವಾಸ್ತವಾಂಶ ದುತ್ತೆಂದು ನನಗೇ ಮುಖಾಮುಖಿಯಾಯಿತು. ಮುಂದಿನ ಪರಿಣಾಮಗಳ ಚಿತ್ರಣ ಮಸಕು ಮಸಕಾಗಿ ಹೊಳೆಯಲಾರಂಭಿಸಿತು. ಅನಾದಿಯಿಂದಲೂ ಮಲೆನಾಡಿನ ಗುಡ್ಡ ಬೆಟ್ಟ ಕಾಡುಗಳ ನಡುವಿನ ಕಣಿವೆಗಳಲ್ಲಿ ತಮ್ಮ ಕಾರ್ಯಗಳಲ್ಲಿ ತೊಡಗಿಕೊಂಡು ನೆಮ್ಮದಿಯ ಜೀವನ ನಡೆಸುತ್ತಿದ್ದ ನಮ್ಮವರ ಪಾಡೇನಾಯಿತು ? ವಾರಾಹಿ ಜಲವಿದ್ಯುತ್ ಯೋಜನೆಯಲ್ಲಿ ಮುಳುಗಡೆಯಾದ ಪ್ರದೇಶ ಹುಲಿಕಲ್ ಘಾಟಿಯಿಂದ (ಬಾಳೆ ಬರೆ ಘಾಟಿ) ಆಗುಂಬೆ ಘಾಟಿಯವರೆಗಿನ ಘಾಟಿಯ ಸರಹದ್ದಿನ ದಟ್ಟವಾದ ಕಾಡಿನ ಪ್ರದೇಶ. ಒಂದು ಕಾಲದಲ್ಲಿ ಶಿಸ್ತಿಗೆ ಹೆಸರಾದ ಶಿವಪ್ಪನಾಯಕನ ಆಡಳಿತಕ್ಕೆ ಒಳಪಟ್ಟಿದ್ದ ನಾಡು. ಸಾವಿರಾರು ವರ್ಷ ಗಳಿಂದ ಯಾವುದೇ ತಂಟೆ ತಕರಾರುಗಳಿಲ್ಲದೆ ಪ್ರಶಾಂತ ವಾತಾವರಣದಲ್ಲಿ ಜೀವಿಸಿದ ಮುಗ್ಧ ಜನರವರು. ತೀರಾ ಇತ್ತೀಚಿನವರೆಗೂ ಕೋರ್ಟುಕಛೇರಿಗಳ ಮೆಟ್ಟಲು ಹತ್ತದೆ ನೆಮ್ಮದಿಯ ಜೀವನ ಅವರದಾಗಿತ್ತು. ಒಮ್ಮಿಂದೊಮ್ಮೆಲೇ ಮುಳುಗಡೆಯ ಭೂತ ಅವರ ಬೆನ್ನುಹತ್ತಿ ಅವರನ್ನು ಕಂಗಾಲುಪಡಿಸಿತು. ಸರ್ಕಾರಿ ಅಧಿಕಾರಿಗಳ ಭ್ರಷ್ಟಾಚಾರದ ಕಪಿಮುಷ್ಠಿಯಿಂದ ಸರಿಯಾದ ಪರಿಹಾರವೂ ದೊರೆಯದೆ, ಸಿಕ್ಕಷ್ಟನ್ನು ತೆಗೆದುಕೊಂಡು ದೂರದೂರದ ಊರುಗಳಲ್ಲಿ ಅವರೆಲ್ಲಾ ಪಡುತ್ತಿರುವ ಬವಣೆ ಯಾರಲ್ಲಾದರೂ ಕನಿಕರ ಹುಟ್ಟಿಸದಿರಲಾರದು. ಹೀಗೆ ಯೋಚನೆಗಳು ಒಂದಾದರೊಂದರ ಮೇಲೆ ನನ್ನ ಮನದಾಳದಲ್ಲಿ ದುಮ್ಮಿಕ್ಕಿ ಬರುತ್ತಿದ್ದವು. ಒಂದು ದಿನ ಮನೆಯಲ್ಲಿ ಉಳಿದುಕೊಂಡು ಅಳಿದುಳಿದ ಹಳೆಯ ಪ್ರಿಯತಾಣಗಳಲ್ಲಿ ಸುತ್ತಾಡಿದೆ. ನಮ್ಮೂರಿಗೆ ಬಂದೊದಗಿದ ಪರಿಸ್ಥಿತಿಗೆ ಮುಮ್ಮಲ ಮರುಗಿ ಕಣ್ಣೀರು ಸುರಿಸಿದೆ. ಭಾರವಾದ ಹೃದಯ ಹೊತ್ತು ಶಿವಮೊಗ್ಗೆಗೆ ಹಿಂದಿರುಗಿದ. ಕಾಲಕ್ರಮೇಣ ಮಾನಿಡ್ಯಾಮ್ ಪೂರ್ಣಗೊಂಡು ದೊಡ್ಡ ಜಲಾಶಯ ನಿರ್ಮಾಣವಾಯಿತು. ಮಲೆನಾಡಿನ ಕಣಿವೆಗಳಲ್ಲಿ ಜಲರಾಶಿ ನುಗ್ಗಿ ಅಲ್ಲಿದ್ದ ಮನೆ-ಮಠ, ಹೊಲಗದ್ದೆಗಳನ್ನು ತನ್ನ ಹೊಟ್ಟೆಯೊಳಗಡೆ ಕಬಳಿಸಿತು. ಇನ್ನು ನಮಗಿರುವುದು ಹಿಂದಿನ ನೆನಪುಗಳು ಮಾತ್ರ. ಒಂದು ಸಾರಿ ಅಂತಹ ನೆನಪುಗಳು ಉಕ್ಕಿ ಬರುತ್ತಿದ್ದಾಗ ಈ "ನೆನಪು"ಗಳನ್ನು ಬರೆಯುವ ಪ್ರಯತ್ನಕ್ಕಿಳಿದೆ. ನನ್ನ ಈ ಪ್ರಯತ್ನ ನಿಮ್ಮೂರು, ನಿಮ್ಮ ಮನೆ, ಮತ್ತು ನಿಮ್ಮ ಬಾಲ್ಯದ ನೆನಪುಗಳನ್ನು ಸ್ವಲ್ಪ ಸಮಯವಾದರೂ ತೆರೆಯಲು ಸ್ಫೂರ್ತಿಯುಂಟುಮಾಡಿದರೆ ನನ್ನ ಪ್ರಲಾಪ ಸಾರ್ಥಕವೆಂದುಕೊಳ್ಳುತ್ತೇನೆ. "ಎಂತಹುದೀ ನೆನಪು ! ಮಾನವನ ಸಹಜವನ್ನು ಅಳೆಯುವ ಅಪೂರ್ವ ಮಾನದಂಡ..... ನೆನಪು ಮೇರೆ ಮೀರಿದುದು ; ಶಾಶ್ವತವಾದುದು.

ನೆನಪು ಪ್ರೀತಿಯ, ಪ್ರೇಮದ ಮತ್ತೊಂದು ಹೆಸರೆಂದು ಹೇಳಿದರೂ ಒಪ್ಪುತ್ತದೆ. ಎಂದಿನ ತಾಯಿಯೋ, ಎಂದಿನ ಅಜ್ಜಿಯೋ, ಎಂದಿನ ಅಣ್ಣನೋ, ಎಂದಿನ ಗೆಳೆಯನೋ, ಎಂದಿನ ಗುರುವೋ ನೆನಪಾದರೆ ಸಾಕು! ಅದೆಂತಹ ದಿವ್ಯ ಸನ್ನಿಧಿ ! ಅದೆಂತಹ ಆನಂದ ವರ್ಷ ! ಎಂದಿನ ಗುಡಿಯೋ; ಎಂದಿನ ನದಿಯೋ ; ಎಂದು ನಡೆಸಿದ ಪೂಜೆಯೋ ; ಎಂದು ಮಾಡಿದ ಸ್ನಾನವೋ; ನೆನಪಾದರೆ ಸಾಕು ! ಪರವಶತೆ, ಪಾವಿತ್ರತೆಯೊಂದಿಗೆ ಸಾಯುಜ್ಯ!" ತಿರುಮಲೆ ತಾತಾಚಾರ್ಯ ಶರ್ಮರ ಈ ನುಡಿಗಳು ಅದೆಷ್ಟು ಸೂಕ್ತ, ಅಲ್ಲವೇ ?



## ಇತ್ತೀಚಿನ ಪ್ರಕಟಣೆಗಳು

| | | | |
|---|---|---|---|
| 1. | ಜಾನಪದ ಶಾಸ್ತ್ರ ಸಿದ್ಧಾಂತಗಳು | ಡಾ|| ವೀರಣ್ಣದಂಡೆ | 150-00 |
| 2. | ಶತಾಯು | ಸೂರ್ಯಕುಮಾರಿ | 95-00 |
| 3. | ಪದಕಟ್ಟಿ ಹಾಡೇನ | ಡಾ|| ಬಸವರಾಜ ಸಬರದ | 45-00 |
| 4. | ನನ್ನ ಕತೆ - ನಮ್ಮ ಕತೆ (ಕೌಟುಂಬಿಕ ಹಿಂಸೆಯ ವಿರುದ್ಧ ಹೋರಾಡಿದ ದಿಟ್ಟ ಮಹಿಳೆಯ ಸಾಹಸಗಾಥೆ) | ಫ್ಲೇವಿಯಾ ಅನು : ನೇಮಿಚಂದ್ರ | 30-00 |
| 5. | ಕುರುಕ್ಷೇತ್ರದ ಕಮಲ | ಎಸ್. ಸಂಧ್ಯಾ | 60-00 |
| 6. | ಚುನಾವಣೆ ಚುನಾವಣೆ | ಜಿ.ಪಿ. ಬಸವರಾಜು | 30-00 |
| 7. | ಕಾರ್ಗಿಲ್ಲಿನ ಕರೆ | ಸಂ. ಜಿ.ಎಂ. ಶಿರಹಟ್ಟಿ | 35-00 |
| 8. | ಕಳಿಂಗ ಸೂರ್ಯ (ಲೇಖನಗಳ ಸಂಗ್ರಹ) | ಎಂ.ಪಿ. ಪ್ರಕಾಶ್ | 80-00 |
| 9. | ಹನ್ನೊಂದು ನಾಟಕಗಳು (ಪುನರ್ ಮುದ್ರಣ) | ಪ್ರೊ|| ಚಂದ್ರಶೇಖರ ಪಾಟೀಲ | 75-00 |
| 10. | ಅಲೀಬಾಬಾ ಮತ್ತು ನಲವತ್ತು ಕಳ್ಳರು (ಪುನರ್ ಮುದ್ರಣ) | ಡಾ|| ಚಂದ್ರಶೇಖರ ಕಂಬಾರ | 45-00 |
| 11. | ಪುಷ್ಪರಾಣಿ (ಪುನರ್ ಮುದ್ರಣ) | ಡಾ|| ಚಂದ್ರಶೇಖರ ಕಂಬಾರ | 30-00 |
| 12. | ಬೇರೊಂದು ದಾರಿ (ಕಥಾ ಸಂಕಲನ) | ಕೆ.ಆರ್. ಸಂಧ್ಯಾರೆಡ್ಡಿ | 30-00 |
| 13. | ಬದುಕೆಂಬ ದಿವ್ಯ (ಕಾದಂಬರಿ) | ಡಾ. ಕಮಲಾ ಹೆಮ್ಮಿಗೆ | 75-00 |
| 14. | ಐದು ಮಕ್ಕಳ ನಾಟಕಗಳು | ಎ.ಎಸ್. ಮೂರ್ತಿ | 75-00 |
| 15. | ಆಡಿ ಬಾ ನನ ಕಂದಾ (ಶಿಶುಗೀತೆಗಳು) | ಲಿಂಗಣ್ಣ ಬಂಧುಕಾರ್ | 25-00 |
| 16. | ಪ್ರಜ್ಞಾ (ಹೆಣ್ಣು ಮಗು ಮತ್ತು ಸ್ತ್ರೀ ಸಂವೇದನೆ ಕುರಿತ ಲೇಖನಗಳು) | ಸಿ.ಜಿ. ಮಂಜುಳಾ | 35-00 |
| 17. | ಹೇಳದಿರಲಾರೆ (ಅರಳುಮರಳಿನ ಸ್ವಗತ ಲಹರಿ) | ಶಾರದಾ ಹೆಮ್ಮಿಗೆ | 45-00 |
| 18. | ಪತ್ರಿಕೆ ಓದಿ ಕನ್ನಡ ಕಲಿ | ಎಸ್. ಸೀತಾಲಕ್ಷ್ಮಿ | 50-00 |
| 19. | ಧಾರೆ (ಕವನ ಸಂಕಲನ) | ಬಿ.ಟಿ. ಕುಮುದಾ ನಾಯಕ | 40-00 |
| 20. | ಕುಶಲೋಪರಿ (ಆರೋಗ್ಯ ಬರಹಗಳು) | ಡಾ|| ವಿ. ರಾಜೇಂದ್ರ | 60-00 |
| 21. | ಪೊಳ್ಳಿನೊಳಗಿನ ಪಕ್ಷಿ (ತತ್ವ ಪದಗಳು) | ಡಾ|| ಕಮಲಾ ಹೆಮ್ಮಿಗೆ | 80-00 |
| 22. | ಬದುಕು ಕೊಟ್ಟಿದ್ದು ಕಲಿಸಿದ್ದು (ಆತ್ಮಕಥನ) | ಶಾರದಾ ಹೆಮ್ಮಿಗೆ | 45-00 |
| 23. | ಕ್ಷಣಿಕವಲ್ಲದ ಕ್ಷಣಗಳು (ಕವನ ಸಂಕಲನ) | ಎಸ್. ಮಾಲತಿ | 25-00 |
| 24. | ಲಾವಣಿ : ಒಂದು ಹಕ್ಕಿ ನೋಟ (ಜಾನಪದ) | ಡಾ|| ಕಮಲಾ ಹೆಮ್ಮಿಗೆ | 25-00 |
| 25. | ಹರಕು ತುಟಿ ಮಹಾತ್ಮೆ (ಹಾಸ್ಯ ಲೇಖನಗಳು) | ಎಚ್.ಎಲ್. ಕೇಶವಮೂರ್ತಿ | 10-00 |

ಚಂದ್ರಪ್ಪಗೌಡರ 'ನಮ್ಮೂರಿನ ನೆನಪುಗಳು' ಅಕ್ಷರ ರೂಪದಲ್ಲಿ ದಾಖಲಾಗುತ್ತಿವೆ. ತಮ್ಮ ಬಾಲ್ಯದ ದಿನಗಳ ನೆನಪಿನ ಸುರುಳಿಯನ್ನು ಬಿಚ್ಚುತ್ತ ಹೋಗುವ ಗೌಡರು ಅವರ ಊರಿನ ಹೊಳೆಗೂ ಅಲ್ಲಿನ ಜನಕ್ಕೂ ಇದ್ದ ಸಂಬಂಧದ ಎಳೆಯನ್ನು ನವಿರಾಗಿ ವಿವರಿಸುತ್ತಾರೆ. ಮತ್ತೆ ಬಾರದ ಬಾಲ್ಯ, ಇನ್ನಿಲ್ಲವಾದ ಆ ಪರಿಸರ, ಗೌಡರನ್ನು ಕಾಡುತ್ತವೆ. ನಮ್ಮಿಂದ ಮರೆಯಾಗಿರುವ ಮಲೆನಾಡಿನ ಹಲವಾರು ಜೀವನ ಕ್ರಮ, ವೈದ್ಯ ಪದ್ಧತಿ, ಮದುವೆ-ದಿಬ್ಬಣ ಸಡಗರ, ಈ ಭೂಭಾಗಕ್ಕೇ ವಿಶೇಷವಾದ ನೆಲದ ಸಿರಿಗೆ ಸಂಬಂಧಿಸಿದ ಹಬ್ಬ-ಹರಿದಿನಗಳ ವಿವರ ಇಲ್ಲಿ ದೊರೆಯುತ್ತವೆ. 'ಹಸಿಗೆ', 'ಹೊಳೆ-ಬಾಳೆಕಾಯಿ', 'ಹತ್ತು-ಮೀನು', 'ಯಾಪೆ', 'ಕೊಣೆ', 'ಅಂಡೆ', 'ಕಡ' ಹಾಕುವುದು ಮುಂತಾದ ಗ್ರಾಮ್ಯ ಶಬ್ದಗಳ ಭಂಡಾರವೇ ಇಲ್ಲಿ ದೊರೆಯುತ್ತದೆ. ಆ ಭಾಗದಲ್ಲಿ ಬಾಲ್ಯವನ್ನು ಕಳೆದ ನನ್ನಂಥವರಿಗೆ ತೀರ ಪರಿಚಯವಿದ್ದ ಈ ಶಬ್ದಗಳು, ಅಲ್ಲಿನ ಜೀವನ ಕ್ರಮದ ಏರುಪೇರು, ನಮ್ಮ ಬದುಕಿನ ಮಾರ್ಗಕ್ಕಾಗಿ ಅನಿವಾರ್ಯವಾದ ವಲಸೆಯಿದಾಗಿ ಈ ಶಬ್ದಗಳು ನಮ್ಮ ಸ್ಮೃತಿ ಪಟಲದಲ್ಲಿ ಅಳಿಸುತ್ತ ಬಂದಿವೆ.



ಡಾ. ಚಂದ್ರಪ್ಪಗೌಡರು, ಈ ಕೃತಿಯನ್ನು ಇನ್ನಷ್ಟು ವಿಸ್ತೃತವಾಗಿ ಬರೆದಿದ್ದಲ್ಲಿ, ಬಹುಶಃ ಬಹಳಷ್ಟು ವಿಷಯಗಳು ಬೆಳಕಿಗೆ ಬರುತ್ತಿದ್ದವು : ದಾಖಲೆಯಾಗುಳಿಯುತ್ತಿದ್ದವು.

-ಡಾ. ಎಚ್.ಸಿ. ವಿಷ್ಣುಮೂರ್ತಿ



ನೆಲಮನೆ ಪ್ರಕಾಶನ
ಶ್ರೀರಂಗ ಪಟ್ಟಣ